# ಅಥಣಿ ತಾಲೂಕಿನ ಶಾಸನಗಳ ಸಾಂಸ್ಕೃತಿಕ ಸಮೀಕ್ಷೆ

ನೋಂದಣಿ ಸಂ : ೧೬೧೩೦೧೦೩೦೦೬೧




ಅಧ್ಯಯನಾಂಗ

ಕನ್ನಡ ವಿಶ್ವವಿದ್ಯಾಲಯ ವಿದ್ಯಾರಣ್ಯ, ಹಂಪಿ

ಕನ್ನಡ ಸಾಹಿತ್ಯ ಅಧ್ಯಯನ ವಿಷಯದಲ್ಲಿ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ನಿಬಂಧ

೨೦೧೬-೧೭

# ಅಥಣಿ ತಾಲೂಕಿನ ಶಾಸನಗಳ ಸಾಂಸ್ಕೃತಿಕ ಸಮೀಕ್ಷೆ

ನೋಂದಣಿ ಸಂ : ೧೬೧೩೦೧೦೩೦೬೧






ಅಧ್ಯಯನಾಂಗ
ಕನ್ನಡ ವಿಶ್ವವಿದ್ಯಾಲಯ ವಿದ್ಯಾರಣ್ಯ, ಹಂಪಿ

ಕನ್ನಡ ಸಾಹಿತ್ಯ ಅಧ್ಯಯನ ವಿಷಯದಲ್ಲಿ ಎಂ.ಫಿಲ್ ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ನಿಬಂಧ

೨೦೧೬-೧೭

# ಪರಿವಿಡಿ

ಅಧ್ಯಾಯ – ೧

## ಅಧ್ಯಯನದ ಅಗತ್ಯ, ಸ್ವರೂಪ, ವೈಧಾನಿಕತೆ ಮತ್ತು ವ್ಯಾಪ್ತಿ

**ಪ್ರಸ್ತಾವನೆ :–**

ಸಂಶೋಧನಾ ರಂಗ ಇತ್ತಿಚೆಗೆ ಹೊಸ ಹೊಸ ಅಂಶಗಳನ್ನು ಮೈಗೂಡಿಸಿಕೊಂಡು ಮುನ್ನಡೆಯುತ್ತಲಿದೆ. ಇಡಿ ದೇಶದ ಚರಿತ್ರೆ ಹೆಚ್ಚು ನೈಜವಾಗಬೇಕಾದರೆ ಅದು ತಲಸ್ಪರ್ಷಿಯಾಗಬೇಕು. ಸಂಶೋಧನೆಯನ್ನುವುದು ಕುತೂಹಲದಲ್ಲಿ ಹುಟ್ಟಿ ಸತ್ಯದಲ್ಲಿ ಪರ್ಯಾವಸಾನವಾಗುವುದಾಗಿದೆ. ತಲಸ್ಪರ್ಷಿಯೆಂದರೆ ಅದು ಹಳ್ಳಿ ಹಳ್ಳಿ ಚರಿತ್ರೆಯಿಂದ ಮೇಲೆರುತ್ತಾ ಹೋಗಬೇಕು. ಇದು ಒಂದು ರೀತಿ ಸಾಂಸ್ಕೃತಿಕ ಚರಿತ್ರೆಯ ನೈಜತೆಯನ್ನು ತಿಳಿದುಕೊಳ್ಳುವ ಪ್ರಯತ್ನವೆಂದರೆ ತಪ್ಪಾಗಲಾರದು.

ಇಂತಹ ಸಂಶೋಧನೆಗಳು ಕರ್ನಾಟಕದಲ್ಲಿ ಶಾಸನ, ಹಸ್ತಪ್ರತಿ, ಭಾಷೆ, ಜನಪದ ಶೋಧ, ಸಂಗ್ರಹ ವಿಶ್ಲೇಷಣೆ ಮತ್ತು ಪ್ರಕಟಣೆಗಳ ಮೂಲಕ ಪ್ರವಹಿಸಿವೆ ಅವುಗಳಿಂದ ಕರ್ನಾಟಕ ಇತಿಹಾಸ, ಸಾಹಿತ್ಯ ಮತ್ತು ಸಂಸ್ಕೃತಿಗಳ ಸಮಗ್ರ ದರ್ಶನವನ್ನು ಮೂಡಿಸುವ ಪ್ರಯತ್ನ ನಡೆದಿದೆ. ಇಂತಹ ಪ್ರಯತ್ನಗಳಲ್ಲಿ ಕರ್ನಾಟಕ ರಾಜ್ಯದ ಬೆಳಗಾವಿ ಜಿಲ್ಲೆಯ ಅಥಣಿ ತಾಲೂಕಿನ ಶಾಸನಗಳನ್ನು ಸಾಂಸ್ಕೃತಿಕವಾಗಿ ಸಮೀಕ್ಷಿಸುವುದು ಇಲ್ಲಿನ ಮುಖ್ಯ ಉದ್ದೇಶವಾಗಿದೆ.

**ಇದುವರೆಗೆ ನಡೆದಿರುವ ಅಧ್ಯಯನಗಳು :–**

ಭವ್ಯ ಸಾಂಸ್ಕೃತಿಕ ಪರಂಪರೆಯುಳ್ಳ ಕನ್ನಡ ನಾಡಿನ ಕುರಿತು ಇದುವರೆಗೆ ಅನೇಕ ಕೃತಿಗಳು ಬೆಳಕು ಕಂಡಿವೆ. ಕನ್ನಡ ನಾಡಿನ ರಾಜವಂಶಗಳ ಕುರಿತು ರಚಿತವಾದ ಕೃತಿಗಳೆಂದರೆ, J.S. Fleet – The Dynasties of Kanares Districts (Bombay Gazetter Vol I$^{st}$ II P.P. 277, 558, 1884) The Gangas of Talakad by Krishn Rao, M.V. Madras-1936, Nagaraj Rao M. S. The Chalukyas of Badami 1978, B.R. GOPAL The Chalukyas of Kalyani and the Kalachuris DHARWAD 1981 A.V. Narshimhamurthy. The yadavas of Devagiri, Mysore 1971, The Sevunas, Srinivas Ritti DHARWAD -1973. ಎನ್. ಲಕ್ಷ್ಮೀನಾರಾಯಣರಾವ ಮತ್ತು ಆರ್.ಎಸ್. ಪಂಚಮುಖಿ ಕರ್ನಾಟಕ ಅರಸು ಮನೆತನಗಳು ಕರ್ನಾಟಕ ಸಾಂಸ್ಕೃತಿಕ ಪರಂಪರೆಯ ಕುರಿತು ಅನೇಕ ಗ್ರಂಥಗಳು ಪ್ರಕಟಗೊಂಡಿವೆ.

ಅವುಗಳಲ್ಲಿ ಪ್ರಮುಖವಾದವುಗಳೆಂದರೆ- A.P. Karmakar The Cultural History of Karnataka, DHARWAD-1996. R. R. DIWAKAR (ed) Karnataka Through the ages, Mysore- 1968. R.S. Mugali, Heritage of Karnataka 1996. R.S. Sharma, Jainism and Karnataka Culture DHARWAD-1940, Dinakar Desai. The Mahamandeleshwaras under the Chalukyas of Kalyani, Bombay 1951. G.R. Kuppushwamy : Economic Conditions in Karnataka Dharwad-1975. ಎಸ್.ಸಿ. ನಂದಿಮಠ ಕನ್ನಡ ನಾಡಿನ ಚರಿತ್ರೆ-ಭಾಗ ೨ (ಕರ್ನಾಟಕ ಧರ್ಮಗಳು/ಬೆಂಗಳೂರು-೧೯೭೧), ಎಂ. ಚಿದಾನಂದಮೂರ್ತಿ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಮೈಸೂರು ೧೯೬೬, ಹೆಚ್. ತಿಪ್ಪೆ ರುದ್ರಸ್ವಾಮಿ ಕರ್ನಾಟಕ ಸಂಸ್ಕೃತಿ ಸಮೀಕ್ಷೆ ಮೈಸೂರು-೧೯೬೮, ಎಂ.ಎಂ. ಕಲಬುರ್ಗಿ(೧) ಶಾಸನ ವ್ಯಾಸಂಗ ಭಾಗ ೧-೨-(೨) ಶಾಸನಗಳಲ್ಲಿ ಶಿವ ಶರಣರು, ಗದಗ ೧೯೭೮ ಸಮಾಧಿ ಬಲಿದಾನ ವೀರಮರಣ ಸ್ಮಾರಕಗಳು ಬೆಂಗಳೂರು. (೩) ಮಾರ್ಗ-ಮೂರು ೧೯೮೨, ಆರ್. ಶೇಷಶಾಸ್ತ್ರಿ ಕರ್ನಾಟಕದ ವೀರಗಲ್ಲುಗಳು ಬೆಂಗಳೂರು-೧೯೮೨.

ಅದರಂತೆ ಪ್ರಾದೇಶಿಕ ಇತಿಹಾಸವನ್ನು ಗಮನಿಸಿದಾಗ ಬಿ.ಎಲ್. ರೈಸ್ ಅವರ ಮೈಸೂರು ಆಂಡ್ ಕೂರ್ಗ ಪ್ರಾಮ್ ಇನ್‌ಸ್ಕ್ರಿಪ್ಶನ್ಸ ಡಾ. ಎಸ್.ಕೆ. ಕೊಪ್ಪಾ ಅವರ "ತರ್ದವಾಡಿ ನಾಡು ಒಂದು ಅಧ್ಯಯನ" ಭೋಜರಾಜ ಪಾಟೀಲರ, "ನಾಗರಖಂಡ ೭೦" ಒಂದು ಅಧ್ಯಯನ ಇತ್ತಿಚಿಗೆ ಪ್ರಕಟಗೊಂಡಿರುವ ಡಾ. ಎಸ್.ಕೆ. ಮೇಲಕಾರವರ "ಕೊಪ್ಪಳ ಜಿಲ್ಲೆ ಶಾಸನಗಳ ಸಾಂಸ್ಕೃತಿಕ ಅಧ್ಯಯನ", ಡಾ. ಧನವಂತ ಹಾಜವಗೋಳರ "ಮುಳಗುಂದ ನಾಡು ಒಂದು ಅಧ್ಯಯನ" ಆರ್. ಹೆಚ್. ಸಜ್ಜನ "ಕರಡಿಕಲ್ಲ ಮುನ್ನೂರು ಸಾಂಸ್ಕೃತಿಕ ಅಧ್ಯಯನ" ವ್ಹಿ.ಎಸ್. ಕಾಂಬಳೆಯವರ "ಅಥಣಿ ತಾಲೂಕಿನ ಸಾಂಸ್ಕೃತಿಕ ಅಧ್ಯಯನ" ಎಂ.ಫಿ.ಎಲ್ ಪ್ರಬಂಧ, ಶ್ರೀ ಆರ್.ಎನ್. ಗುರವ ಅವರ ಲೇಖನ ಕಣಂಬಡೆನಾಡು ಡಾ. ಬಿ.ಆರ್.ರಾಠೋಡ ಕಂಣಬಡೆ ಮೂನೂರು ಒಂದು ಅಧ್ಯಯನ ಡಾ. ಆರ್. ಎಸ್. ದೊಡ್ಡನಿಂಗಪ್ಪಗೋಳ ರವರ "ಕೊಟ್ಟಲಗಿ ಸಾಂಸ್ಕೃತಿಕ ಸಂಕಥನ" ಪಿ.ಎಚ್.ಡಿ ಪ್ರಬಂಧ, ಶ್ರೀನಿವಾಸ ರಿತ್ತಿ ಅವರ "ಬೆಳ್ವೊಲ ೩೦೦" ಲೇಖನ ಮೊದಲಾದ ಕೃತಿ ಮತ್ತು ಲೇಖನಗಳು ಪ್ರಕಟಗೊಂಡಿವೆ. ಇಂದು ಪ್ರಾಚೀನ ಮತ್ತು ಮಧ್ಯಕಾಲಿನ ಕನ್ನಡ ನಾಡಿನ ಪ್ರಮುಖ ಆಡಳಿತ ವಿಭಾಗಗಳನ್ನು ಕುರಿತು ಎಂ.ಫಿ.ಎಲ್., ಪಿ.ಹೆಚ್.ಡಿ ಅಧ್ಯಯನಗಳು ಬರದಿಂದ ನಡೆದಿವೆ. ಅನೇಕತೆಯಲ್ಲಿ ಏಕತೆ ತತ್ವದ ಆಧಾರದ ಮೇಲೆ ನಿಂತ ನಮ್ಮ ದೇಶದ ಇತಿಹಾಸವು ಪ್ರಾದೇಶಿಕ ಇತಿಹಾಸದ ಬೆಳವಣಿಗೆಗೆ ಹೊಂದಿಕೊಂಡೆ ಬೆಳೆಯಬೇಕಾಗಿದೆ ಇಂತಹ ಅಧ್ಯಯನಗಳು ಆಯಾ ಪ್ರದೇಶಗಳ ರಾಜಕೀಯ, ಧಾರ್ಮಿಕ, ಸಾಮಾಜಿಕ ಹಾಗೂ

ಸಾಂಸ್ಕೃತಿಕ ನೆಲೆ-ಬೆಲೆಗಳ ಸೆಲೆಯಾಗಿ ಕರ್ನಾಟಕ ಸಂಸ್ಕೃತಿಯ ಪೂರ್ಣ ಚಿತ್ರ ಒದಗಿಸಲು ತುಂಬ ಸಹಾಯಕವಾಗುತ್ತದೆ.

**ಅಧ್ಯಯನದ ಉದ್ದೇಶಗಳು :-**

ಪ್ರಸ್ತುತ ಅಧ್ಯಯನ ಅಥಣಿ ತಾಲೂಕಿನ ಪರಿಸರದಲ್ಲಿ ಅನೇಕ ಅರಸು ಮನೆತನಗಳು ಆಳ್ವಿಕೆಮಾಡಿದ ಸಂಗತಿಗಳನ್ನು ಇಲ್ಲಿರುವ ಶಾಸನಗಳು ಉಲ್ಲೇಖಿಸುತ್ತವೆ. ಕಲ್ಯಾಣ ಚಾಲುಕ್ಯರು, ಕಲಚೂರಿಗಳು, ಯಾದವರು, ಸೇವುಣರು, ಶೀಲಾಹಾರರು, ವಿಜಯನಗರ ಅರಸರು ಹಾಗೂ ವಿಜಯಪುರದ ಅರಸರು ಮುಂತಾದ ರಾಜರು ತಮ್ಮ ವಿಶಾಲವಾದ ರಾಜ್ಯವನ್ನು ಹಲವಾರು ವಿಭಾಗಗಳಲ್ಲಿ ವಿಂಗಡಿಸಿ ಆಳ್ವಿಕೆ ಮಾಡಿರುವುದು ಕಂಡು ಬರುತ್ತದೆ. ಅಲ್ಲದೆ ಶಾಸನಗಳ ನೆರವಿನಿಂದ ಆಯಾ ವಿಭಾಗಗಳ ಅಧ್ಯಯನಕ್ಕಾಗಿ ಸಂಶೋಧನೆಗಳು ನಡೆದಿವೆ. ಆದರೆ ಒಟ್ಟು ಅಥಣಿ ತಾಲೂಕಿನ ಶಾಸನಗಳನ್ನು ಆಧಾರವಾಗಿಟ್ಟುಕೊಂಡು ಸಾಂಸ್ಕೃತಿಕ ಅಧ್ಯಯನ ನಡೆದಿರುವುದಿಲ್ಲಾ. ಆಂಶಿಕವಾಗಿ ಅಥಣಿ ತಾಲೂಕಿನ ಅನೇಕ ಸಂಗತಿಗಳನ್ನು ಬೇರೆ ಬೇರೆ ಅಧ್ಯಯನಗಳು ಉಲ್ಲೇಖಿಸಿವೆ. ಒಟ್ಟು ಶಾಸನಗಳ ಕುರಿತು ಅಧ್ಯಯನ ನಡೆಸಿ ಒಂದು ಸಾಂಸ್ಕೃತಿಕ ಸ್ವರೂಪವನ್ನು ಕಟ್ಟಿಕೊಡಬೇಕೆಂಬುದು ಈ ಅಧ್ಯಯನದ ಮುಖ್ಯ ಅಗತ್ಯತೆಯಾಗಿದೆ.

ಕನ್ನಡ ನಾಡಿನ ಸಾಂಸ್ಕೃತಿಕ ಹಿರಿಮೆಯನ್ನು ಹೊತ್ತು ಮೆರೆದ ಈ ಪ್ರಸ್ತುತ ಅಧ್ಯಯನದ ಅಥಣಿ ತಾಲೂಕಿನ ಪ್ರದೇಶವು ಹಲವು ಹಿಂದಿನ ಆಡಳಿತ ವಿಭಾಗದಲ್ಲಿ ಹಂಚಿ ಹೋಗಿತ್ತು.

೧) ಕರ್ಹಾಡ ನಾಲ್ಸಾಸಿರ, ೨) ಮಿರಿಂಜೆ ಮೂರು ಸಾಸೀರ, ೩) ಉಂಬರವಾಣಿ ಮೂವತ್ತಾರು ಬಾಡ, ೪) ತುಂಗಳ ಹನ್ನೆರಡು, ೫) ಕೋರ್ಗಟನೂರು, ೬) ಬಾಡಗಿ, ೭) ಕಲ್ಯಾಣ ಹೀಗೆ ವಿವಿಧ ವಿಭಾಗಗಳಲ್ಲಿ ಹಂಚಿ ಹೋಗಿರುವ ಅಥಣಿ ಪರಿಸರದ ಇತಿಹಾಸವನ್ನು ಶಾಸನಗಳ ಅಧ್ಯಯನದ ಮೂಲಕ ಸಾಂಸ್ಕೃತಿಕ ಅಧ್ಯಯನ ಕೈಗೊಳ್ಳುವುದು ಹಾಗೂ ಕರ್ನಾಟಕದ ಇತಿಹಾಸದಲ್ಲಿ ಈ ನಾಡು ವಹಿಸಿದ ಪಾತ್ರದ ಮೇಲೆ ಬೆಳಕು ಚೆಲ್ಲುವುದು ಪ್ರಸ್ತುತ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

**ಅಧ್ಯಯನದ ವಿಧಾನ :-**

ಇಂತಹ ಅಧ್ಯಯನಗಳಿಗೆ ಪಟ್ಟಿಕೆ ಮಾಡಿಕೋಳ್ಳುವ ಕ್ರಮ ಪ್ರಸಿದ್ದವಾದದ್ದು. ಕಣಂಬಡೆ ನಾಡಿನಲ್ಲಿ ಲಭ್ಯವಿರುವ ಶಾಸನ ಸಾಹಿತ್ಯ ಸ್ಮಾರಕಗಳನ್ನು ಅಧ್ಯಯನ ಮಾಡಿ ಆಯಾ ವಿಷಯಗಳಿಗೆ ಸಂಬಂಧಪಟ್ಟ ವಿಷಯ ಪಟ್ಟಿಕೆಗಳನ್ನು ತಯಾರಿಸಿಕೊಳ್ಳಲಾಯಿತು.

ಶಾಸನಗಳು ಮೊದಲ ಪ್ರಮಾಣ ಭೂತ ಆಕರಗಳಾದುದರಿಂದ ಶಾಸನಗಳ ಸ್ವರೂಪ, ಕಾಲ, ಸ್ಥಾನ, ಅರಸರ ಮಾಹಿತಿಯೊಂದಿಗೆ ಅವು ಒಳಗೊಂಡ ವಿಷಯಗಳನ್ನು ಪ್ರತ್ಯೇಕವಾದ ಪಟ್ಟಿಕೆಗಳಲ್ಲಿ ದಾಖಲಿಸಿಕೊಳ್ಳಲಾಯಿತು ಹಾಗೂ ಕ್ಷೇತ್ರ ಕಾರ್ಯದ ಮೂಲಕ ಕಂಡು ಬಂದ ಶಾಸನ, ದೇವಾಲಯ, ವೀರಗಲ್ಲುಗಳು, ಮಾಸ್ತಿ ಕಲ್ಲುಗಳು ಅವುಗಳ ಭಾವ ಚಿತ್ರ ಸಹಾಯದಿಂದ ಸಂಗ್ರಹಿಸಿದ ವಿಷಯಗಳನ್ನು ಪಟ್ಟಿಕೆಗಳಲ್ಲಿ ಸೇರಿಸಲಾಯಿತು. ಹೀಗೆ ಶಾಸನ, ಸಾಹಿತ್ಯ ಕೃತಿ, ಸ್ಮಾರಕಗಳ ಅಧ್ಯಯನದಿಂದ ಪಟ್ಟಿಕೆಗಳಲ್ಲಿ ಸಂಗ್ರಹಿಸಿದ ವಿಷಯಗಳನ್ನೆಲ್ಲಾ ಆಯಾ ವಿಭಾಗಕ್ಕೆ ಅನುಸಾರವಾಗಿ ರಾಜಕೀಯ, ಸಾಮಾಜಿಕ, ಆರ್ಥಿಕ, ಧಾರ್ಮಿಕ ಸಾಂಸ್ಕೃತಿಕ ವಿಷಯಾನುಕ್ರಮದಲ್ಲಿ ಹೊಂದಿಸಿಕೊಳ್ಳಲಾಯಿತು. ಅವುಗಳು ಈ ನಾಡಿನ ಆಡಳಿತ ಜನ-ಜೀವನದೊಂದಿಗೆ ಅಲ್ಲಿನ ಚರಿತ್ರೆ, ಸಾಂಸ್ಕೃತಿಕ ನೆಲೆ-ಬೆಲೆಗಳನ್ನರಿಯಲು ಸಾಧ್ಯವಾಯಿತು. ನಮ್ಮ ಅಧ್ಯಯನಕ್ಕೆ ಸಂಬಂಧಿಸಿದಂತೆ ಈ ಮಾದರಿಯಲ್ಲಿ ಇದುವರೆಗೆ ಬಂದ ಅಧ್ಯಯನಗಳ ನೆರವನ್ನು ಪಡೆಯಲಾಗಿದೆ. ಈ ಅಧ್ಯಯನಗಳ ನೇರವನ್ನು ಪೂರಕವಾಗಿ, ಪ್ರಾಸಂಗಿಕವಾಗಿ ವಿಷಯದ ಸಮಗ್ರವಾದ ಚರ್ಚೆಯ ಖಚಿತತೆಗಾಗಿ ಬಳಸಿಕೊಂಡಿದ್ದೇನೆಯೇ ಹೊರತು ಒಂದು ವಿಷಯದ ತಲ ಸ್ಪರ್ಷಿ ಅಧ್ಯಯನ ನನ್ನ ವ್ಯಾಪ್ತಿಗೆ ಮೀರಿದ್ದು ಎಂಬುದು ನನ್ನ ನಂಬಿಕೆ. ಇಷ್ಟೇ ಮಿತಿಯ ಒಳಗಡೆ ರಚನೆಗೊಂಡ ನನ್ನ ಈ ಸಂಶೋಧನೆ ಸಮಗ್ರ ಅಧ್ಯಯನದ ಪ್ರಯತ್ನವೇ ಹೊರತು ಸಮಗ್ರ ಅಧ್ಯಯನವಲ್ಲ ಎಂಬುದನ್ನು ವಿನಮ್ರವಾಗಿ ತಿಳಿಸಬಯಸುತ್ತೇನೆ. ಏಕೆಂದರೆ ಸಂಶೋಧನೆಯ ವ್ಯಾಪ್ತಿ ಬಹಳ ವಿಸ್ತಾರವಾದದ್ದು ಎನ್ನುವುದರ ಅರಿವು ನನಗೆ ಇದೆ.

**ಅಧ್ಯಯನದ ವ್ಯಾಪ್ತಿ :-**

ಯಾವುದೇ ಒಂದು ಸಂಶೋಧನೆ ನಿರ್ದಿಷ್ಟ ವ್ಯಾಪ್ತಿಯನ್ನು ಹೊಂದಿರಬೇಕಾಗುತ್ತದೆ. ವ್ಯಾಪ್ತಿ ಎಂದರೆ ಆ ಕ್ಷೇತ್ರದ ವೈಶಾಲ್ಯತೆ, ಹರವು ಅಧ್ಯಯನದ ಸೀಮಾ ರೇಖೆ ಎಂದರ್ಥ. ಇದು ಮಾನವನ ರಾಜಕೀಯ, ಸಾಮಾಜಿಕ, ಧಾರ್ಮಿಕ, ಸಾಹಿತ್ಯಿಕ, ಕಲೆ-ವಾಸ್ತುಶಿಲ್ಪ ಹಾಗೂ ಚಿತ್ರಕಲೆ ಹೀಗೆ ಹಲವಾರು ವಿಷಯಗಳ ಸಾರವೇ ಮಾನವನ ಜೀವನ ಚರಿತ್ರೆ ಎಂದು ಒಪ್ಪಿಕೊಳ್ಳಬೇಕಾಗಿದೆ.

ಅಥಣಿ ತಾಲೂಕಿನ ಪ್ರದೇಶದಲ್ಲಿ ದೊರೆತಿರುವ ಶಾಸನಗಳ ಮೂಲಕ ಇದರ ವ್ಯಾಪ್ತಿಯನ್ನು ಗುರುತಿಸಬಹುದಾಗಿದೆ. ಈ ಪ್ರದೇಶದ ವಿವಿಧ ಮುಖಗಳ ಇತಿಹಾಸದ ಸಮಗ್ರ ಚಿತ್ರವನ್ನು ಒದಗಿಸುವುದರ ಮೂಲಕ ಮಧ್ಯಕಾಲಿನ ಕರ್ನಾಟಕ ಇತಿಹಾಸದಲ್ಲಿ ಈ ಪ್ರದೇಶ ವಹಿಸಿದ ಪಾತ್ರದ ಮೇಲೆ ಬೆಳಕು ಚೆಲ್ಲುವುದು ಪ್ರಸ್ತುತ ಅಧ್ಯಯನದ ಗುರಿಯಾಗಿದೆ. ಈ ಅಧ್ಯಯನಕ್ಕೆ ಕ್ರಿ.ಶ.ಪೂರ್ವ ೩ನೇ ಶತಮಾನದಿಂದ ೨೦ ನೇ ಶತಮಾನದೊರೆಗಿನ ಕಾಲಮಿತಿಯನ್ನು ಹಾಕಿಕೊಳ್ಳಲಾಗಿದೆ. ಈ ಪ್ರದೇಶದಲ್ಲಿ ಲಿಖಿತ

ದಾಖಲೆಗಳಾದ ಶಾಸನಗಳಿಗೆ ಕ್ರಿ.ಶ. ೧೦೨೨ರಲ್ಲಿ ಕೊಟ್ಟಲಗಿಯಲ್ಲಿ ದೊರೆತ ಎರಡನೇ ಜಯಸಿಂಹನ ಶಾಸನ ಈ ಪ್ರದೇಶದಲ್ಲಿ ಹಿರಿಮೆಯನ್ನು ಹೊಂದಿದೆ. ಇದು ಚಾಲುಕ್ಯ ಅರಸ ಎರಡನೇ ಜಯಸಿಂಹನ ಕಾಲದ್ದಾಗಿದೆ.

ಐತಿಹಾಸಿಕವಾಗಿ ಪ್ರಸಿದ್ಧಿ ಪಡೆದಿದ್ದ ಪ್ರಾಚೀನ ಮಧ್ಯಕಾಲೀನ ಇತಿಹಾಸ ಹೊಂದಿದ ಪ್ರಸ್ತುತ ಅಧ್ಯಯನದ ಪ್ರದೇಶವು ನಾಡಿನ ಹೃದಯ ಸ್ಥಾನದಂತಿದ್ದು ಈ ಸ್ಥಳವು ಕನ್ನಡ ನಾಡಿನ ಅನೇಕ ಅರಸು ಮನೆತನಗಳಾದ ಕಲ್ಯಾಣ ಚಾಲುಕ್ಯರು, ಕಲಚೂರಿಗಳು, ಯಾದವರು, ಶೀಲಾಹಾರರು, ವಿಜಯನಗರ ಅರಸರು ಹಾಗೂ ವಿಜಯಪೂರದ ಆದಿಲಶಾಹಿಗಳ ಮನೆತನದ ಆಳ್ವಿಕೆಗೆ ಒಳಪಟ್ಟಿತ್ತೆಂಬ ವಿಷಯ ದೊರೆತ ಶಾಸನಗಳಿಂದಲೇ ತಿಳಿಯಬರುತ್ತದೆ. ಪ್ರಸ್ತುತ ಅಧ್ಯಯನದ ವ್ಯಾಪ್ತಿಯು ಅಥಣಿ ತಾಲೂಕನ್ನು ಹೊಂದಿದ್ದರು ಈ ನಾಡಿನ ಹೊರ ವಲಯದ ಜತ್ತ ತಾಲೂಕಿನ ಉಮರಾಣಿಯಲ್ಲಿ ಕಲ್ಯಾಣಿ ಚಾಲುಕ್ಯರ ಕಾಲದ ಹಾಗೂ ಕಲಚೂರಿ ಅರಸರ ಕಾಲದ ಹೀಗೆ ಎರಡು ಶಾಸನಗಳು ದೊರೆತಿದ್ದು, ಅಥಣಿ ತಾಲೂಕಿನ ಅಧ್ಯಯನಕ್ಕೆ ಪೂರಕವಾಗಿದ್ದು ಬಳಸಿಕೊಳ್ಳಲಾಗಿದೆ.

**ಅಧ್ಯಯನದ ಸ್ವರೂಪ :-**

ಈ ಸಂಪ್ರಬಂಧವು ಒಟ್ಟು ೫ ಅಧ್ಯಾಯಗಳನ್ನು ಒಳಗೊಂಡಿದ್ದು ಮೊದಲನೆಯ ಅಧ್ಯಾಯ ಇದುವರೆಗೆ ನಡೆದಿರುವ ಅಧ್ಯಯನಗಳು, ಉದ್ದೇಶ, ವಿಧಾನ, ವ್ಯಾಪ್ತಿ, ಎಂದಿದ್ದು ಇದರಲ್ಲಿ ಅಧ್ಯಯನದ ಅಗತ್ಯ ಸ್ವರೂಪದೊಂದಿಗೆ ಆಗಿರುವ ಅಧ್ಯಯನಗಳು ಆಕರ ವೈಧಾನಿಕತೆ ವ್ಯಾಪ್ತಿಯನ್ನು ಅಧ್ಯಯನ ಕ್ರಮವನ್ನು ಸ್ಪಷ್ಟಪಡಿಸಲಾಗಿದೆ. ಎರಡನೆಯ ಅಧ್ಯಾಯದಲ್ಲಿ ಅಥಣಿ ತಾಲೂಕಿನ ಚಾರಿತ್ರಿಕ ಹಿನ್ನೆಲೆಯನ್ನು ಗಮನಿಸಲಾಗಿದೆ. ಒಟ್ಟು ತಾಲೂಕಿನ ಸಮಗ್ರ ಚಾರಿತ್ರಿಕ ಸಂಗತಿಗಳನ್ನು ಇಲ್ಲಿ ಚರ್ಚಿಸಲಾಗಿದೆ. ಅಧ್ಯಾಯ-೩ ರಲ್ಲಿ ಅಥಣಿ ತಾಲೂಕಿನ ಶಾಸನಗಳ ಭಾಷೆ ಸಾಹಿತ್ಯಿಕ ಸ್ವರೂಪವನ್ನು ಗಮನಿಸಲಾಗಿದ್ದು, ಸಾಹಿತ್ಯಿಕವಾಗಿ ಶಾಸನಗಳ ಮಹತ್ವ ಶಾಸನಗಳಲ್ಲಿ ಭಾಷೆಯ ಸಾಹಿತ್ಯಗಳ ಹಿರಿಮೆಯನ್ನು ಗಮನಿಸಲಾಗಿದೆ. ಇನ್ನೂ ೪ ನೇ ಅಧ್ಯಾಯದಲ್ಲಿ ಅಥಣಿ ತಾಲೂಕಿನ ಶಾಸನಗಳ ಸಾಂಸ್ಕೃತಿಕ ಪ್ರಾಮುಖ್ಯತೆ ಗಮನಿಸಲಾಗಿದ್ದು ರಾಜಕೀಯ, ಸಾಮಾಜಿಕ, ಆರ್ಥಿಕ, ಧಾರ್ಮಿಕ, ಶೈಕ್ಷಣಿಕ, ಸಾಹಿತ್ಯಿಕ ಸ್ಥಿತಿಗತಿಗಳನ್ನು ಗಮನಿಸಲಾಗಿದೆ. ಒಟ್ಟು ಸಾಂಸ್ಕೃತಿಕ ಪರಂಪರೆಯನ್ನು ಕಟ್ಟಿಕೊಡಲು ಯತ್ನಿಸಲಾಗಿದೆ. ೫ನೆಯ ಅಧ್ಯಾಯದಲ್ಲಿ ಅಧ್ಯಯನದ ಫಲಶ್ರುತಿಯ ಕುರಿತು ಸಮಾರೋಪವಿದೆ. ಕೊನೆಯಲ್ಲಿ ಅನುಬಂಧವಿದ್ದು ಅಥಣಿ ತಾಲೂಕಿನ ಶಾಸನಗಳು, ಭಾವ ಚಿತ್ರಗಳು ಗ್ರಂಥ ಋಣದ ಪಟ್ಟಿ ನೀಡಲಾಗಿದೆ. ಹೀಗೆ ಶಾಸನಗಳಿಂದ ಲಭ್ಯವಾದ ವಿವಿಧ ವಿಷಯಗಳನ್ನು ಕಲೆ ಹಾಕುವುದರೊಂದಿಗೆ ವಿಷಯ ಸಮರ್ಥನೆಗಾಗಿ, ಅರ್ಥ ಸ್ಪಷ್ಟತೆಗಾಗಿ ಇದುವರೆಗೆ ಬಂದಿರುವ ಅಧ್ಯಯನಗಳ ನೆರವನ್ನು ಪಡೆಯಲಾಗಿದೆ.

# ಅಧ್ಯಾಯ-೨

## ಅಥಣಿ ತಾಲೂಕಿನ ಚಾರಿತ್ರಿಕ ಹಿನ್ನೆಲೆ

### ಅಧ್ಯಯನದ ಪರಿಸರ :

ಬೆಳಗಾವಿ ಜಿಲ್ಲೆಯ ಅಥಣಿ ತಾಲೂಕು ಕನ್ನಡ ನಾಡಿನ ಗಡಿಭಾಗ. ಬೋಳು ಬೆಟ್ಟಗಳಿಂದ ಕೂಡಿದ ಬರಡು ಮಣ್ಣಿನ ಬಯಲು ಪ್ರದೇಶವಿದು. ಕಡಿಮೆ ಮಳೆ, ಹೆಚ್ಚು ಬೀಸಿಲು, ಬರದ ತಲೆದಿಂಬು ಕರ್ನಾಟಕದ ಗಡಿ ತೋರಿಸುವ ಈ ತಾಲೂಕಿನ ಪಶ್ಚಿಮೋತ್ತರ ಮತ್ತು ಈಶಾನ್ಯ ಭಾಗಗಳು ಮಹಾರಾಷ್ಟ್ರಕ್ಕೆ ಹೊಂದಿಕೊಂಡಿವೆ. ನೈಋತ್ಯಕ್ಕೆ ಚಿಕ್ಕೋಡಿ, ದಕ್ಷಿಣಕ್ಕೆ ರಾಯಬಾಗ ಆಗ್ನೇಯಕ್ಕೆ ಬಾಗಲಕೋಟ ಜಿಲ್ಲೆಯ ಜಮಖಂಡಿ ತಾಲೂಕುಗಳು ಇವೆ. ಪೂರ್ವಕ್ಕೆ ವಿಜಯಪುರ ಜಿಲ್ಲೆ ಇದೆ. ಅಥಣಿಯ ದಕ್ಷಿಣ ಭಾಗಕ್ಕೆ ಕೃಷ್ಣೆ ಜೀವದಾಯಿನಿಯು ಬರಡು ಬದುಕಿಗೆ ಚಿಗುರು ಮುಡಿಸುವ ದೇವ ಗಂಗೆಯು ಆಗಿದ್ದಾಳೆ. ಕೃಷ್ಣೆಯ ಇಕ್ಕೆಲದಲ್ಲಿ ಫಲವತ್ತಾದ ಗದ್ದೆಗಳಿವೆ. ಕಬ್ಬು ಹುಲುಸಾಗಿ ಬೆಳೆಯುತ್ತದೆ. ತಾಲೂಕಿನ ಪೂರ್ವೋತ್ತರ ಭಾಗಗಳು ಬರಡಾಗಿದ್ದರೆ ಪಶ್ಚಿಮ ಮತ್ತು ದಕ್ಷಿಣ ಭಾಗಗಳು ಹಸಿರಿನಿಂದ ಸಮೃದ್ಧವಾಗಿವೆ.

ಬೆಳಗಾವಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸದ ವಸ್ತು-ನಿಷ್ಠ ರಚನೆಯ ಸಂದರ್ಭದಲ್ಲಿ ಅಥಣಿ ತಾಲೂಕಿನ ಪರಿಸರವನ್ನು ಮರೆಯುವಂತಿಲ್ಲ ಅಷ್ಟು ಮಹತ್ವದ ಕೊಡುಗೆಯನ್ನು ಈ ಭಾಗ ನೀಡಿದೆ. ಅಥಣಿ ತಾಲೂಕು ಸುಮಾರು ೫,೦೦೦ ಸಾವಿರ ವರ್ಷಗಳಿಗಿಂತಲೂ ಹೆಚ್ಚು ಪ್ರಾಚೀನ ಇತಿಹಾಸವನ್ನು ಹೊಂದಿದೆ.[೧] ಕೃಷ್ಣಾ ನದಿಯ ಪಕ್ಕದ ಅಥಣಿ ತಾಲೂಕಿನ ಸತ್ತಿ ಗ್ರಾಮದಲ್ಲಿ ಹಾಗೂ ಕೊಟ್ಟಲಗಿ ಗ್ರಾಮದಲ್ಲಿ ಇತಿಹಾಸಪೂರ್ವ ಕುರುಹುಗಳಿವೆ. ಕ್ರಿ.ಶ.ಪೂ. ೨೦೦೦ ರಿಂದ ೧೦೦೦ ಅವಧಿಯಲ್ಲಿ ರಚಿತಗೊಂಡಿರಬಹುದಾದ ಸಚಿತ್ರ ಮಡಕೆಗಳು ಹಾಗೂ ಮಡಕೆ ತುಂಡುಗಳು ದೊರೆತಿವೆ. ಈ ಪರಿಸರ ತನ್ನ ಮಡಿಲಿನಲ್ಲಿ ಇತಿಹಾಸ ಪೂರ್ವ ಯುಗದಿಂದ ಸಾಂಸ್ಕೃತಿಕ ಬೆಳವಣಿಗೆಯ ಎಲ್ಲ ಘಟ್ಟಗಳ ಕುರುಹುಗಳನ್ನು ಒಳಗೊಂಡಿದೆ. ಈ ಕುರುಹುಗಳು ಈ ಪರಿಸರದ ಸಮಕಾಲಿನ ಸಾಂಸ್ಕೃತಿಕ ಇತಿಹಾಸದ ಮುಖಗಳನ್ನು ಮತ್ತು ಈ ಪರಿಸರದಲ್ಲಿ ಹಲವು ಶತಮಾನಗಳಲ್ಲಿ ಮಾನವ ಸಂಸ್ಕೃತಿ ಬೆಳೆದುಬಂದ ದಾರಿಯ ನೋಟಗಳನ್ನು ಪರಿಚಯಿಸುತ್ತವೆ.

### ಇತಿಹಾಸ ಪೂರ್ವ ನೆಲೆಗಳು :-

ಡಾ. ಅ.ಸುಂದರ, ಡಾ.ಆರ್.ಎಸ್.ಪಂಚಮುಖಿ, ಡಾ.ಹೆಚ್.ಎಸ್.ಕಾಂಬಳೆ ಮೊದಲಾದ ಸಂಶೋಧಕರು ಈ ಪರಿಸರದ ನದಿ ಮತ್ತು ಬೆಟ್ಟಗಳ ಪಾತ್ರಗಳಲ್ಲಿರುವ ಅನೇಕ ಗ್ರಾಮಗಳ

ಇತಿಹಾಸ ಪೂರ್ವ ಕಾಲಾವಧಿಯ ವಿವಿಧ ಸಂಸ್ಕೃತಿಗಳ ಆಯುಧಗಳು, ಮಡಕೆಗಳು ಇತ್ಯಾದಿ ಅವಶೇಷಗಳನ್ನು ಬೆಳಕಿಗೆ ತಂದಿದ್ದಾರೆ. ಇವು ಈ ಪರಿಸರದಲ್ಲಿ ಮಾನವ ಸಂಸ್ಕೃತಿ ಬೆಳೆದು ಬಂದ ಬಗೆಯನ್ನು ಕಾಣಬಹುದಾಗಿದೆ.[೨] ಐನಾಪೂರ, ರೋಲಿ, ಸಿಂದಗಿ ಗ್ರಾಮಗಳಲ್ಲಿ ಆದಿ ಹಳೆಯ ಶಿಲಾಯುಗ ಸಂಸ್ಕೃತಿಯ ಅಂದರೆ ಒಂದು ಲಕ್ಷದಿಂದ ನಾಲ್ಕು ಲಕ್ಷ ವರ್ಷಗಳಷ್ಟು ಹಳೆಯ ಆಯುಧೋಪಕರಣಗಳು ದೊರೆತಿವೆ. ಐನಾಪೂರ, ರೋಲಿ, ಶೇಗುಣಸಿ, ಸತ್ತಿ ಗ್ರಾಮಗಳಲ್ಲಿ ಮಧ್ಯ ಹಳೆಯ ಶಿಲಾಯುಗ ಸಂಸ್ಕೃತಿಯ [ಹತ್ತು ಸಾವಿರದಿಂದ ನಾಲವತ್ತು ಸಾವಿರ ಪೂರ್ವ] ವಿವಿಧ ಉಪಕರಣಗಳು ಬೆಳಕಿಗೆ ಬಂದಿವೆ. ಶೇಗುಣಸಿ, ಸತ್ತಿ, ಸಪ್ತಸಾಗರ, ಮಂಗಸೂಳಿ, ಕೊಡಗಾನೂರು ಗ್ರಾಮಗಳಲ್ಲಿ ಸೂಕ್ಷ್ಮ (ಮಧ್ಯ) ಶೀಲಾಯುಗ ಸಂಸ್ಕೃತಿಯ (೨೫೦೦ ರಿಂದ ೧೦,೦೦೦) ವರ್ಷಗಳಷ್ಟು ಪೂರ್ವ ವಿವಿಧ ಉಪಕರಣಗಳು ದೊರೆತಿವೆ. ಸತ್ತಿ, ಸಪ್ತಸಾಗರ ಗ್ರಾಮಗಳಲ್ಲಿ ನೂತನ ಶೀಲಾಯುಗ ಸಂಸ್ಕೃತಿಯ (ಕ್ರಿ.ಶ.ಪೂ. ಸುಮಾರು ೨೦೦೦ ದಿಂದ ೧೦೦೦ ಸಾವಿರ ವರೆಗೆ) ಆಯುಧ ಮುಂತಾದ ಉಪಕರಣಗಳು ದೊರೆತಿವೆ. ನೇಸೂರ, ಶೇಗುಣಸಿ, ಸತ್ತಿ, ಸಪ್ತಸಾಗರ, ಗುಂಡೇವಾಡಿ ಗ್ರಾಮಗಳಲ್ಲಿ ಶೀಲಾ-ತಾಮ್ರಯುಗ ಸಂಸ್ಕೃತಿಯ (ಕ್ರಿ.ಶ.ಪೂ. ಸುಮಾರು ೨೩೦೦ ರಿಂದ ೧೦೦೦ ವರೆಗೆ) ಉಪಕರಣಗಳು ಬೆಳಕಿಗೆ ಬಂದಿವೆ. ಹುಲಗಬಾಳಿ, ಐಗಳಿ, ಕಾಗವಾಡ, ಬನ್ನೂರ, ತೇಲಸಂಗ, ಕೊಟ್ಟಲಗಿ ಗ್ರಾಮಗಳಲ್ಲಿ ಕಬ್ಬಿಣಯುಗದ (ಬೃಹತ ಶಿಲಾಯುಗ) ಸಂಸ್ಕೃತಿಯ ಕ್ರಿ.ಶ.ಪೂ ೧೨೦೦ ರಿಂದ ೧೦೦೦ ರ ವರೆಗೆ) ಕುರುಹುಗಳು ಗೋಚರಿಸಿವೆ ಈ ಕುರುಹುಗಳಲ್ಲಿ ಹುಲಗಬಾಳಿಯಲ್ಲಿರುವ ಬೂದಿದಿಬ್ಬವು ಮಹತ್ವದ್ದಾಗಿದೆ. ಸಂಬರಗಿಯಲ್ಲಿ ಇತಿಹಾಸ ಆರಂಭ ಸಂಸ್ಕೃತಿಯ (ಕ್ರಿ.ಶ.ಪೂ. ೧ ರಿಂದ ೩ನೇ ಶತಮಾನವು ಪ್ರಾಚ್ಯಾವಶೇಷಗಳು ಬೆಳಕಿಗೆ ಬಂದಿವೆ. ಈ ಮೇಲಿನ ಎಲ್ಲ ಕುರುಹುಗಳು ಆಯಾ ಸಂಸ್ಕೃತಿಗಳ ಸಮಕಾಲೀನ ಸಾಂಸ್ಕೃತಿಕ ಇತಿಹಾಸ ರಚನೆಯಲ್ಲಿ ಪ್ರಮುಖ ಸಂಗತಿಗಳಾಗಿವೆ.

**ಪ್ರಾಚೀನ ರಾಜಕೀಯ ವಿಭಾಗಗಳು :-**

ತಾಲೂಕಿನ ಬಹುಭಾಗ ಕಲ್ಯಾಣಿ ಚಾಲುಕ್ಯರ ಆಳ್ವಿಕೆಗೆ ಒಳಪಟ್ಟಿತ್ತು, ಹೀಗಾಗಿ ಅಥಣಿ ರಾಜಕೀಯ ಪರಿಸರವು ವಿಭಾಗ- ಉಪ ವಿಭಾಗಗಳಲ್ಲಿ ಅನೇಕ ರಾಜರ ಆಳ್ವಿಕೆಗೆ ಒಳಪಟ್ಟಿತ್ತು. ಈ ಪರಿಸರವು ಕನ್ನಡ ನಾಡನ್ನಾಳುತ್ತಾ ಬಂದ ವಿವಿಧ ಅರಸು ಮಹಾಮಂಡಳೇಶ್ವರ, ಮಹಾ ಸಾಮಂತ, ಪ್ರಭು ಗಾವುಂಡ, ಮನೆತನಗಳ ನೇರ ಮತ್ತು ಪ್ರಭಾವಕ್ಕೊಳಪಡುತ್ತಾ ಬಂದಿರುವುದು ಶಾಸನಗಳು ಹಾಗೂ ಪುರಾತತ್ವ ಹಾಗೂ ಸಾಹಿತ್ಯಿಕ ದಾಖಲೆಗಳಿಂದ ತಿಳಿದುಬರುತ್ತದೆ.

ಕನ್ನಡ ನಾಡು ಕಾವೇರಿಯಿಂದ ಗೋದಾವರಿಯವರೆಗೆ ಹಬ್ಬಿತ್ತು. ಇಂತಹ ವಿಶಾಲವಾದ ತಮ್ಮ-ತಮ್ಮ ಸಾಮಾಜ್ಯವನ್ನು ಅರಸು ಮನೆತನಗಳು ಆಡಳಿತದ ಅನೂಕುಲಕ್ಕಾಗಿ ಹಲವು ಪ್ರಧಾನ ಮತ್ತು ಉಪ ಪ್ರಾಂತ್ಯಗಳಲ್ಲಿ ವಿಂಗಡಿಸಿ ಆಳ್ವಿಕೆ ನಡೆಸಿವೆ. ಇಂದಿನ ಅಥಣಿ ತಾಲೂಕಿನ ಪರಿಸರವು ಹಿಂದೆ ಕರಹಾಡ ನಾಲ್ಕು ಸಾವಿರ, ಮಿರಿಂಜೆ ಮೂಸಾಸಿರ, ಕನ್ನಂಬಡೆ ಮೂನ್ನೂರು, ಕುಂತಳದೇಶ, ಮೂವತ್ತಾರುಂಬಾಡ, ತುಂಗಳ ಹನ್ನೆರಡು ಮೊದಲಾದ ಪ್ರಾಂತ್ಯಗಳಲ್ಲಿ ಹಂಚಿ ಹೋಗಿತ್ತು.

ಕುಂತಳ ದೇಶ ಪ್ರಾಚೀನ ಕರ್ನಾಟಕದ ಇನ್ನೋಂದು ಹೆಸರು ಕುಂತಳ "ಸಪ್ತಾರ್ಧ ಲಕ್ಷ" ವೆಂದು ಕರೆದಿರುವ ಈ ನಾಡು ಏಳುವರೆ ಲಕ್ಷ ಗ್ರಾಮಗಳ ಪ್ರದೇಶವಾಗಿತ್ತು ಈಗಿನ ಅಥಣಿ ತಾಲೂಕಿನ ಪಶ್ಚಿಮ ಭಾಗವನ್ನು ಹೊರತು ಪಡಿಸಿ ಉಳಿದೆಲ್ಲ ಭಾಗಗಳು ಕನ್ನಂಬಡೆ ಮೂನ್ನೂರರ ಆಡಳಿತದಲ್ಲಿದ್ದವು ಪಶ್ಚಿಮ ಭಾಗವನ್ನು ವೊಳವಾಡದ ಶೀಲಾಹಾರರು ಆಳುತ್ತಿದ್ದರು. ಚಾಲುಕ್ಯರ ನಂತರ ಕಲಚೂರ್ಯ ಬಿಜ್ಜಳ, ಯಾದವ ಸಿಂಘಣ ಮತ್ತು ಮರಾಠಾ ಸಾಮ್ರಾಟ ಶಿವಾಜಿ ಈ ಪ್ರದೇಶವನ್ನು ಆಳಿದರು. ಅಥಣಿಯನ್ನು ಕ್ರಿ.ಶ. ೧೬೭೯ ರಲ್ಲಿ ಶಿವಾಜಿ ಮಗ ಸಂಭಾಜಿಯಿಂದ ಮೊಗಲರು ಕಿತ್ತುಕೊಂಡರು, ಕ್ರಿ.ಶ. ೧೭೨೦ ರಲ್ಲಿ ನಿಜಾಮ ಉಲ್-ಮುಲ್ಕ ಅಥಣಿಯನ್ನು ಗೆದ್ದು ಕೊಲ್ಹಾಪೂರದ ಅರಸನಿಗೆ ಕೊಟ್ಟನು, ಬಳಿಕ ಇದು ಶಾಹೂ ಮಹಾರಾಜನಿಗೆ ಸೇರಿತು. ಆತನ ಮರಣದ ನಂತರ ಕ್ರಿ.ಶ. ೧೮೪೮ ರಲ್ಲಿ ಆಂಗ್ಲರ ವಶವಾಯಿತು.[೨]

ಕಲ್ಯಾಣದ ಚಾಲುಕ್ಯ ಮನೆತನದ ಆಳ್ವಿಕೆಯ ಕಾಲಾವಧಿಯಲ್ಲಿ ಈ ಪರಿಸರದಲ್ಲಿ ವಿಶಿಷ್ಟ ಶೈಲಿ ಮತ್ತು ವಿನ್ಯಾಸದ ದೇವಾಲಯಗಳು ನಿರ್ಮಾಣವಾಗಿವೆ. ಅವುಗಳಲ್ಲಿ ಅಥಣಿಯ ಅಮೃತಲಿಂಗೇಶ್ವರ, ಬಾಡಗಿಯ ತ್ರಿಕೂಟಾಚಲ (ಕಲ್ಮೇಶ್ವರ) ಬಳ್ಳಿಗೇರಿಯ ತ್ರಿಕೂಟಾಚಲ (ನರಸಿಂಹ-ಬಸವಣ್ಣ) ತ್ರಿಕೂಟಾಚಲ ಜೀನಾಲಯ (ವೀರಭದ್ರ) ರಾಮಲಿಂಗೇಶ್ವರ, ಐನಾಪೂರದ ಆಧಿನಾಥ, ಫಾರ್ಶ್ವನಾಥ, ಜಂಬುಲಿಂಗೇಶ್ವರ, ವಿಶ್ವನಾಥ, ರಾಮ ಲಿಂಗೇಶ್ವರ, ಸತ್ತಿಯ, ಕೊಟ್ಟಲಗಿಯ, ತೆಲಸಂಗದ ಕಲ್ಮೇಶ್ವರ ದೇವಾಲಯಗಳು, ಸತ್ತಿಯ ಮಲ್ಲಿಕಾರ್ಜುನ ತ್ರೀಕೂಟಾಚಲ (ಲಕ್ಷ್ಮೀ ನರಸಿಂಹ) ಸವದಿಯ ತ್ರೀಕೂಟಾಚಲ (ಗೋಪಾಲ ಕೃಷ್ಣ) ಆಧಿನಾಥ ನಂದಗಾಂವ ತ್ರೀಕೂಟಾಚಲ (ಬಸವಣ್ಣ) ಕೊಕಟನೂರದ ತ್ರೈ ಪುರುಷ (ತ್ರೀಕೂಟಾಚಲ) ರಾಮತೀರ್ಥದ ತ್ರೀಕೂಟಾಚಲ, (ರಾಮೇಶ್ವರ) ಕೋಹಳ್ಳಿಯ ಸಂಗಮೇಶ್ವರ, ಕೊಟ್ಟಲಗಿಯ ಸಿದ್ದೇಶ್ವರ, ಕಲಾಲಿಂಗೇಶ್ವರ, ಶೇಡಬಾಳದ ಬಸವಣ್ಣ, ಮಲ್ಲಿಕಾರ್ಜುನ ಉತ್ತಮ ನಿದರ್ಶನಗಳಾಗಿವೆ. ಜೊತೆಗೆ ಸಮಕಾಲೀನ, ಶೈವ, ವೈಷ್ಣವ, ಜೈನ, ಶಾಕ್ತ, ಗಾಣಪತ್ಯೆ, ಸೌರ, ಮೊದಲಾದ ಪಂತಗಳ ವೈಶಿಷ್ಟ್ಯವಾದ ಶಿಲ್ಪಗಳು ಈ ಪರಿಸರದಲ್ಲಿ ಗೋಚರಿಸುತ್ತದೆ.

**ಅಥಣಿಗೆ ಭೇಟಿ ನೀಡಿದ ರಾಷ್ಟ್ರನಾಯಕರು ಹಾಗೂ ಸ್ವಾತಂತ್ರ ಸಂಗ್ರಾಮ :-**

ಅಥಣಿ ತಾಲೂಕು ಸ್ವಾತಂತ್ರ್ಯ ಸಂಗ್ರಾಮದಲ್ಲಿ ಚಿರಾಯುವಾದ ಸ್ಥಾನವನ್ನು ಗಳಿಸಿಕೊಂಡಿದೆ ತಾಲೂಕಿನ ಅನೇಕ ಗ್ರಾಮಗಳು ಬ್ರಿಟಿಷರ ಎದೆ ನಡುಗಿಸುವಂತಹ ಹೋರಾಟಗೈದು ಇತಿಹಾಸದ ಪುಟದಲ್ಲಿ ಶ್ಯಾಶತ ನೆಲೆ ಕಂಡುಕೊಂಡಿದೆ. ಈ ಪ್ರದೇಶದ ಸ್ವಾತಂತ್ರ್ಯ ಸಂಗ್ರಾಮದ ಘಟನೆಗಳು ಚಿರಸ್ಮರಣಿಯವಾಗಿವೆ. ಲೋಕಮಾನ್ಯ ಬಾಲ ಗಂಗಾಧರ ತಿಲಕರು ೧೯೧೭ ರಲ್ಲಿ ಅಥಣಿ ಬೆಟ್ಟಿ ನೀಡಿ ಸ್ವಾತಂತ್ರ್ಯ ಸಂಗ್ರಾಮದ ಹಣತೆಯನ್ನು ಪ್ರಜ್ವಲಿಸಿ ಪ್ರತಿ ಮನೆ ಮನೆಯಲ್ಲಿ ಹೋರಾಟದ ಕಿಚ್ಚನ್ನು ತುಂಬಿದ್ದಾರೆ. ಈಗಲೂ ಆಗಿನ ಸ್ವಾತಂತ್ರ್ಯ ಸಂಗ್ರಾಮದಲ್ಲಿ ತಿಲಕರು ಧರಿಸುತಿದ್ದ ಪೇಟಾ ಇಂದು ನೂರೊಂದಪ್ಪ ಶೆಟ್ಟೆಯವರ ಮನೆಯಲ್ಲಿ ಇಂದಿಗೂ ಇದೆ. ಸಿದ್ದೇಶ್ವರ ಗುಡಿಯ ಪಕ್ಕದಲ್ಲಿ ನಡೆದ ಸ್ವತಂತ್ರ್ಯ ಹೋರಾಟದ ಕಹಳೆ ಅಥಣಿ ಸ್ವಾತಂತ್ರ್ಯ ಘರ್ಜನೆಗೆ ನಾಂದಿಯಾಯಿತು.

ಲೋಕಮಾನ್ಯ ಬಾಲ-ಗಂಗಾಧರ ತಿಲಕರು ಶ್ರೀ ಮಧ್‌ಅಥಣಿಯ ಮುರಘೇಂದ್ರ ಶಿವಯೋಗಿಗಳನ್ನು ಭೇಟಿಯಾದ ಸಂದರ್ಭದಲ್ಲಿ ಶ್ರೀಗಳಿಗೆ ಸ್ವಾತಂತ್ರ್ಯ ಕನಸುನನಸಾಗುವುದೇ ಎಂದು ಕೇಳಿದರಂತೆ ಆಗ ಪೂಜ್ಯರು "ನೀವು ಕಂಡ ಕನಸು ನನಸಾಗುತ್ತದೆ ಆದರೆ ಅದನ್ನು ನೋಡಲು ನಿವಿರುವುದಿಲ್ಲಾ" ಎಂದ ಮಾತು ನಿಜವಾಯಿತು ಆ ಮಾತು ಈಗ ಇತಿಹಾಸವಾಗಿದೆ. ಸ್ವಾತಂತ್ರ್ಯದ ಕನಸು ಕಾಣುತ್ತಾ ಲೋಕಮಾನ್ಯ ತೀಲಕರು ೧೯೨೦ ರಲ್ಲಿ ಮುಂಬೈಯಲ್ಲಿ ಮಡಿದರು. ಶ್ರೀ ಶಿವಪ್ಪಾ ಜಮಖಂಡಿಯವರು ತೀಲಕರ ಚೀತಾ ಭಸ್ಮವನ್ನು ಅಥಣಿಗೆ ತಂದು ಸಿದ್ದೇಶ್ವರ ಮೋಪತ ವಾಚನಾಲಯದಲ್ಲಿ ಸಂಗ್ರಹಿಸಿದ್ದನ್ನು ನಾವು ಈಗಲೂ ನೋಡಬಹುದಾಗಿದೆ. ಭಾರತ ದೇಶದ ಹೆಮ್ಮೆಯ ಪುತ್ರ ಮಹಾತ್ಮಾ ಗಾಂಧಿ ೧೯೩೩ ರಲ್ಲಿ ಅಥಣಿಗೆ ಬೇಟ್ಟಿ ನೀಡಿ ಯುವ ಹೃದಯಗಳಲ್ಲಿ ಹೋರಾಟದ ಕನಸು ತುಂಬಿ ಹೋದದ್ದು ಮರೆಯಲಾಗದ ಇತಿಹಾಸ.

ಬಾರ್ಡೋಲಿಯಲ್ಲಿ ವಲ್ಲಭಬಾಯಿ ಪಟೇಲರು ಕರೆ ನೀಡಿದ ತೆರಿಗೆ ನಿರಾಕರಣೆ ಸಿಂಹ ಘರ್ಜನೆ ೧೯೨೪ ರಲ್ಲಿ ಅಥಣಿ ತಾಲೂಕಿನ ಕೊಟ್ಟಲಗಿ ಗ್ರಾಮದಲ್ಲಿ ಮೊಳಗಿದೆ. ಇಡಿ ಗ್ರಾಮವೇ ಒಗ್ಗಟ್ಟಾಗಿ ತೆರಿಗೆ ನೀಡುವುದನ್ನು ನಿರಾಕರಿಸಿದ ಅಪೂರ್ವ ಘಟನೆ ಇಲ್ಲಿ ನಡೆದಿದೆ. ೧೯೨೪ ರಲ್ಲಿ ಬೆಳಗಾವಿಯಲ್ಲಿ ಜರುಗಿದ ಎ.ಐ.ಸಿ.ಸಿ ಅಧಿವೇಶನ ಸಂದರ್ಭದಲ್ಲಿ ಕೊಟ್ಟಲಗಿ ಗ್ರಾಮಸ್ಥರನ್ನು ಅಭಿನಂದಿಸಲಾಯಿತು. ೧೯೨೮ ರಲ್ಲಿ ಸರ್ಧಾರ ವಲ್ಲಭಾಯಿ ಪಟೇಲರು ಅಥಣಿಗೆ ಭೇಟ್ಟನಿಡಿದಾಗ ಈ ಘಟನೆಯನ್ನು ಸ್ಮರಿಸಿಕೊಂಡರು. ಕೊಟ್ಟಲಗಿ ಸ್ವಾತಂತ್ರ್ಯ ಹೋರಾಟಗಾರರು ಪ್ರಾಣದ ಹಂಗು ತೊರೆದು ಹೋರಾಡಲು ವಿಜಯಪುರ ಜಿಲ್ಲೆಯ ಇಂಡಿ ತಾಲೂಕಿನ ಶ್ರೀ ಕ್ಷೇತ್ರ ಇಂಚಗೇರಿ ಮಠದ ಸದ್ಗುರುಗಳಾದ ಮಾಧವಾನಂದ ಪ್ರಭುಜಿಯವರು ದಿವ್ಯ ಪ್ರೇರಣಾಶಕ್ತಿಯಾಗಿದ್ದರು ಶ್ರೀ ತಮ್ಮಣ್ಣಾ ನಂದಗೊಂಡ, ಶ್ರೀ ಗುರುಪಾದಪ್ಪಾ ಜತ್ತಿ, ಶ್ರೀ

ರೇವಣ್ಣಾ ಬಡವ್ವಗೋಳ, ಶ್ರೀ ಸಿದ್ದಪ್ಪಾ ಝುಳಕಿ, ಶ್ರೀ ಸಿದ್ದಪ್ಪಾ ನಾಟೀಕಾರ, ಶ್ರೀ ಬಸಪ್ಪಾ ಆಜೂರ, ಶ್ರೀ ವೆಂಕಟೇಶ ಗೋ. ಕುಲಕರ್ಣಿ, ಶ್ರೀ ಸಿದರಾಯ ನಾಯಿಕ, ಶ್ರೀ ಇಬ್ರಾಹಿಂ ಗುಡು ಮುಲ್ಲಾ ಜತ್ತದಿಂದ ಬರುವ ಪೋಸ್ಟ ಬ್ಯಾಗ ಕಸಿದುಕೊಂಡು ಪ್ರತಿಭಟಿಸಿದ ಘಟನೆ ಇನ್ನೂ ಜಿವಂತವಾಗಿದೆ. ಶ್ರೀ ಶಾಂತಪ್ಪಾ ಮತ್ತು ಶ್ರೀ ಮಲ್ಲೇಶಪ್ಪಾ ಶ್ರೀ ಮಾಧವಾನಂದರ ಆಣತಿಯಂತೆ ಮದ್ದು-ಗುಂಡು ತಯಾರಿಸುತ್ತಿದ್ದರು ಇದರ ಸುಳಿವು ಹಿಡಿದ ಆಂಗ್ಲರು ಕೊಟ್ಟಲಗಿ ಗ್ರಾಮದ ಪ್ರತಿಯೊಂದು ಮನೆಯನ್ನು ಹುಡುಕಿದರೂ ಒಂದು ಸಿಗಲಿಲ್ಲ. ಏಕೆಂದರೆ ಪ್ರತಿಯೊಂದು ಮನೆಯ ಹೆಣ್ಣು ಮಕ್ಕಳು ಬಟ್ಟೆ ತೊಳೆಯುವ ಬುಟ್ಟಿಗಳಲ್ಲಿ ಪಿಸ್ತೂಲು ಮದ್ದು-ಗುಂಡುಗಳನ್ನು ತೆಗೆದುಕೊಂಡು ಹೋಗಿ ಗ್ರಾಮದ ಪಶ್ಚಿಮ ಭಾಗದಲ್ಲಿರುವ ಹೂ ತೋಟದ ಬಾವಿಯಲ್ಲಿ ಹಾಕಿದ್ದು ಮರೆಯದ ಇತಿಹಾಸ. ಗ್ರಾಮದಲ್ಲಿ ಸ್ವಾತಂತ್ರ್ಯ ಸಂಗ್ರಾಮವು ಪ್ರತಿಯೋಬ್ಬ ಯುವ ಪೀಳಿಗೆಯಲ್ಲಿ ಸ್ವಾತಂತ್ರ್ಯದ ಕಿಚ್ಚನ್ನು ಹಚ್ಚುವಂತೆ ಚಟುವಟಿಕೆಗಳು ನಡೆಯುತ್ತಿದ್ದವು. ಕೊಟ್ಟಲಗಿಯಲ್ಲಿ ಸ್ವಾತಂತ್ರ್ಯದ ಸೈನಿಕರ ಪಡೆಗಳು ರಚನೆಯಾಗಿದ್ದವು ಅಲ್ಲದೇ ಗ್ರಾಮದಲ್ಲಿ ಯುವಕರಿಗೆ ತರಬೇತಿ ನೀಡುವ ಕವಾಯತಗಳು ನಡೆಯುತ್ತಿದ್ದವು. ಇಚಲಕರಂಜಿಯ ದೇಶಭಕ್ತ ರತ್ನಪ್ಪಾ ಕುಂಬಾರರಂತವರು ಶ್ರೀ ಮಾಧವಾನಂದರ ನೇತೃತ್ವದಲ್ಲಿ ಅನೇಕ ಸ್ವಾತಂತ್ರ್ಯದ ಶಿಬಿರಗಳನ್ನು ನಡೆಸಿದ್ದು ಇತಿಹಾಸವಾಗಿದೆ.[೪]

ಹೀಗೆ ಅಥಣಿ ಪರಿಸರದ ಚಾರಿತ್ರಿಕತೆಯು ಕನ್ನಡ ನಾಡಿನ ಇತಿಹಾಸದೊಂದಿಗೆ ಹಾಸು-ಹೋಕ್ಕಗಾಗಿ ಬೆಳೆದು ಬಂದಿದೆ. ಈ ಪರಿಸರದ ನದಿ, ಬೆಟ್ಟ, ಕಾಡು, ಹಳ್ಳ ಮೊದಲಾದ ಭೌಗೋಳಿಕ ಅಂಶಗಳು ಇಲ್ಲಿ ಪ್ರಾಚೀನ ಕಾಲದಿಂದಲೂ ಮಾನವ ಸಂಸ್ಕೃತಿಯ ವಿವಿಧ ಘಟ್ಟಗಳು ಬೆಳೆದು ಬರಲು ಪ್ರಧಾನ ಪಾತ್ರ ವಹಿಸಿದೆ ಜೊತೆಗೆ ಈ ಪರಿಸರದಲ್ಲಿ ಅರಸೋತ್ತಿಗೆ ಗೈಯುತ್ತ ಬೆಳೆದು ಬರಲು ಪ್ರಧಾನ ಪಾತ್ರ ವಹಿಸಿವೆ. ಜೊತೆಗೆ ಈ ಪರಿಸರದಲ್ಲಿ ಆಳಿದ ಪ್ರತಿಯೊಂದು ರಾಜ ಮನೆತನಗಳು ಶೈವ, ವೈಷ್ಣವ, ಜೈನ ಧರ್ಮಗಳಿಗೆ ಸಂಬಂಧಿಸಿದಂತೆ ವಿವಿಧ ಬಗೆಯ ಸಾಂಸ್ಕೃತಿಕ ಚಟುವಟಿಕೆಗಳನ್ನು ಕೈಗೊಂಡು ಸ್ಥಳಿಯ ಇತಿಹಾಸ, ಸಂಸ್ಕೃತಿ ವಾಸ್ತು ಶಿಲ್ಪ ಮೊದಲಾದ ಕ್ಷೇತ್ರಗಳನ್ನು ಶ್ರೀಮಂತಗೊಳಿಸಿವೆ ಈ ಪರಿಸರದ ಪ್ರತಿಯೊಂದು ಹಳ್ಳಿಗಳಲ್ಲಿ ವಿಫುಲವಾದ ಪುರಾತತ್ವ ಅವಶೇಷಗಳು ಲಭ್ಯವಾಗುತ್ತವೆ. ಇವುಗಳ ಅಧ್ಯಯನ ಕನ್ನಡ ನಾಡಿನ ಇತಿಹಾಸ ಪುನರ ರಚನೆಯಲ್ಲಿ ಸಹಾಯಕಬಹುದಾಗಿದೆ ಈ ಅಧ್ಯಯನದ ಉದ್ದೇಶವೂ ಇದೆ ಆಗಿದೆ.

ಕೊನೆ ಟಿಪ್ಪಣಿಗಳು :

೧. ಅಥಣಿ ಬನಿ-ದನಿ ಡಾ.ವ್ಹಿ.ಎಸ್.ಮಾಳಿ ಚನ್ನಬಸವೇಶ್ವರ ಗ್ರಂಥಮಾಲೆ ಶ್ರೀ ಮೋಟಗಿಮಠ ಅಥಣಿ ೨೦೧೧.

೨. ಬೆಳಗಾವಿ ಜಿಲ್ಲೆ ಗೆಜೆಟಿಯರ್.

೩. ಅಥಣಿ ಬನಿ-ದನಿ ಡಾ.ವ್ಹಿ.ಎಸ್.ಮಾಳಿ ಚನ್ನಬಸವೇಶ್ವರ ಗ್ರಂಥಮಾಲೆ ಶ್ರೀ ಮೋಟಗಿಮಠ ಅಥಣಿ ೨೦೧೧.

೪. ಕೊಟ್ಟಲಗಿ ಗ್ರಾಮ ಸಾಂಸ್ಕೃತಿಕ ಸಂಕಥನ ಪಿ.ಎಚ್.ಡಿ. ಪ್ರಬಂಧ ಕ.ವಿ.ವಿ. ಹಂಪಿ ಡಾ.ಆರ್.ಎಸ್.ದೊಡ್ಡನಿಂಗಪ್ಪಗೋಳ ೨೦೧೩.

## ಅಧ್ಯಾಯ-೩

## ಅಥಣಿ ತಾಲೂಕಿನ ಶಾಸನಗಳ ಸಾಹಿತ್ಯಿಕ ಮತ್ತು ಭಾಷಿಕ ಸ್ವರೂಪ

### ಶಾಸನದಲ್ಲಿ ಸಾಹಿತ್ಯಿಕ ಅಂಶಗಳು :

ಶಾಸನಗಳ ವ್ಯವಹಾರಿಕ ದಾಖಲೆಗಳಾಗಿರುವುದರಿಂದ ಭಾಷೆಯ ಆರಂಭದ ಕಾಲದಲ್ಲಿಯೇ ರೂಪಗೊಂಡಿರುತ್ತವೆ. ಆದ್ದರಿಂದ ಯಾವುದೇ ಭಾಷೆ ಅಥವಾ ಸಾಹಿತ್ಯದ ಉಗಮದ ಮೇಲೆ ಅವು ಅಮೂಲ್ಯ ಬೆಳಕು ಬೀರುತ್ತವೆ. ಅವುಗಳ ತಲಸ್ಪರ್ಶಿ ಅಧ್ಯಯನದಿಂದ ಆಯಾ ಭಾಷೆ ಸಾಹಿತ್ಯಗಳ ಪ್ರಾಚೀನತೆಯನ್ನು ನಿರ್ಣಯಿಸಬಹುದು. ರಾಜಕೀಯ ಚರಿತ್ರೆ ರಚನೆಗೆ ಶಾಸನಗಳು ಮೂಲ ಬೀಜಗಳಾದಂತೆ ಭಾಷೆ ಸಾಹಿತ್ಯಗಳ ಹಳಮೆಯನ್ನು ಪ್ರಚುರ ಪಡಿಸಲು ಅವು ಅತ್ಯಂತ ವಿಶ್ವಾಸಾರ್ಹ ಸಾಧನೆಗಳೆನಿಸಿವೆ.

ಶಾಸನಗಳು ಆಯಾ ಕಾಲದ ಜನಭಾಷೆಯಲ್ಲಿ ಲಿಖಿತಗೊಂಡ ದಾಖಲೆಗಳಾಗಿವೆ. ಇವು ನಡೆದು ಬಂದ ರೀತಿ, ಸಾಧಿಸಿದ ಸಾಹಿತ್ಯ ಸಿದ್ದಿಯು ಅಷ್ಟೆ ಮೌಲಿಕವಾಗಿದೆ. ೩೦೦೦ ದಷ್ಟು ಅನ್ಯ ಭಾಷಾ ಶಾಸನಗಳನ್ನು ಬಿಟ್ಟರೆ ಉಳಿಯುವ ಸುಮಾರು ೨೦ ಸಾವಿರ ಕನ್ನಡ ಶಾಸನಗಳಲ್ಲಿ ಸಾಹಿತ್ಯ ಗದ್ಯದಿಂದ ಕೂಡಿದ ಶಾಸನಗಳು ಸಾವಿರಾರು ಸಂಖ್ಯೆಯಲ್ಲಿವೆ. ಇವುಗಳಲ್ಲಿ ಮೊದ ಮೊದಲು ಸಾಮಾನ್ಯ ಗದ್ಯ ಹೆಚ್ಚು ಬರ ಬರುತ್ತ ಸಮಾಸಯುಕ್ತ ಪದ್ಯ ಮತ್ತು ಗದ್ಯ ಪದ್ಯ ಮಿಶ್ರಣ ಹೆಚ್ಚಾಗಿ ಕಂಡುಬರುತ್ತದೆ. ಗದ್ಯ ಪದ್ಯಗಳ ಅದರಲ್ಲಿಯು ಕಂದ ವೃತ್ತಗಳ ಬಳಕೆ ಅಧಿಕ ಗದ್ಯ ಸಾಮಾನ್ಯವಾಗಿದೆ.[೧]

### ಶಾಸನದಲ್ಲಿ ವೃತ್ತಗಳು :-

ಅಥಣಿ ತಾಲೂಕಿನ ಕೊಕಟನೂರು ಹಾಗೂ ಅಥಣಿ ತಾಲೂಕಿನ ವಿಷಯ ವಸ್ತುವನ್ನೊಳಗೊಂಡ ಜತ್ತ ತಾಲೂಕಿನ ಉಮರಾಣಿ ಶಾಸನಗಳಲ್ಲಿ ಸಾಹಿತ್ಯದ ರೂಪುಗಳಾದ ಚಂಪೂ, ವೃತ್ತ ಮತ್ತು ಕಂದ ಬಳಕೆಗೊಂಡಿರುವುದು ಕಾಣುತ್ತೇವೆ. ಈ ನಾಡಿನ ಶಾಸನಗಳ ರಚನೆಯಲ್ಲಿ ಕರ್ನಾಟಕ ಖ್ಯಾತ ವೃತ್ತಗಳಾದ ಮಹಾಸ್ರಗ್ದರಾವೃತ್ತ, ಮತ್ತೇಭ ವಿಕ್ರೀಡಿತ ವೃತ್ತ, ಚಂಪಕಮಾಲಾ ವೃತ್ತ, ಶಾಲಿನಿ ವೃತ್ತ, ಅನುಷ್ಟುಪ, ಮಾಲಿನಿ, ಶಾರ್ದೂಲ ವಿಕ್ರೀಡಿತ ವೃತ್ತಗಳು ಮತ್ತು ಕಂದ ಪದ್ಯಗಳು ಕಂಡು ಬಂದಿರುವುದು ಗಮನಾರ್ಹವಾಗಿದೆ.

ಕೊಕಟನೂರ ಶಾಸನವು[೨] ಹನ್ನೊಂದು ವೃತ್ತಗಳನ್ನು ಒಳಗೊಂಡಿದ್ದು ಇವುಗಳಲ್ಲಿ ಮೂರು ಮಹಾಸ್ರಗ್ದರಾ ವೃತ್ತ, ಐದು ಮತ್ತೇಭವಿಕ್ರಿಡಿತ ವೃತ್ತಗಳು; ಒಂದು ಚಂಪಕಮಾಲಾ ವೃತ್ತ, ಒಂದು ಶಾಲಿನಿ ವೃತ್ತ ಮತ್ತು ಒಂದು ಅನುಷ್ಟದ ವೃತ್ತದ ಪದ್ಯಗಳಿವೆ ಆದರೆ ಶಾಸನವು ಅಲ್ಲಲ್ಲಿ ತ್ರುಟಿತವಾಗಿರುವುದರಿಂದ ಸ್ಪಷ್ಟವಾಗಿರುವಂತಹ ಕೆಲವು ವೃತ್ತಗಳ ಉದಾಹರಣೆಯನ್ನು ವಿವರಿಸಲಾಗಿದೆ.

**ಮತ್ತೇಭ ವಿಕ್ರೀಡಿತ ವೃತ್ತ :–**

ಜನಿತೋತ್ಸಾಹದ ಮಣ್ಡಳೇಶತಿಳಕಂ ಶ್ರೀ ಜೋಗಭೂಪಂ ಜಗ
ಜನ ಚಿನ್ತಾಮಣಿ ತಾನಿದಂ ಬೆಸಸಲೀ ತ್ರೈಮೂರ್ತಿ ದೇವರ್ಗ್ಗೆ ಶಾ
ಸನಂ ಶಾಸನಮಾಗಲೆಯ್ದೆ ಬರೆದಂ ವಿದ್ವಜನಾಂಭೋಜನೀ
ವನಹಂಸಂ ಜೇನವರ್ಮ ಪಣ್ಡಿತನಿಳಾಭಾಸ್ವದ್ಯ ಶೋಮಣ್ಡಿ ತಂ[೨]

**ಲಕ್ಷಣ :** ಈ ಶಾಸನ ಪದ್ಯದಲ್ಲಿ ಮತ್ತೇಭ ವಿಕ್ರೀಡಿತದ ಎಲ್ಲಾ ನಿಯಮಗಳಿದ್ದು ಪ್ರತಿ ಪಾದದಲ್ಲಿ ಇಪ್ಪತ್ತು ಅಕ್ಷರಗಳು ಬಂದಿವೆ. ನಾಲ್ಕು ಸಾಲಿನ ಪದ್ಯವಾಗಿರುವ ಇದರಲ್ಲಿ ಪ್ರತಿಪಾದದಲ್ಲಿ ಸ, ಭ, ರ, ನ, ಮ, ಯ ಗಣಗಳು ಕೊನೆಯಲ್ಲಿ ಒಂದು ಗುರು ಉಳಿದಿದೆ. ಹದಿಮೂರನೇಯ ಸ್ಥಾನದಲ್ಲಿ "ಯತಿ" ಬಂದಿದೆ ಹಾಗೂ ಪ್ರತಿ ಪಾದದಲ್ಲಿ "ಆದಿ ಪ್ರಾಸ" ಕಾಣಬಹುದಾಗಿದೆ.

**ಚಂಪಕ ಮಾಲಾ ವೃತ್ತ :**

ಜನಕಜೆ ಸಾಟಿ ಹೇಮವತಿ–ರೋಹಿಣಿ ತತ್ಸರೂಪೇವಾ
ಗ್ವನಿತೆ ಸಮಂ ತಿಳೋತ್ತಮ ಸಮಾನ ಮರುನ್ಧತಿ ಮಿಕ್ಕ ಪೊಲ್ವಿಗೋ
ಮಿನಿ ದೊರೆ ಸತ್ಯಭಾಮೇ ಸರಿ ರೇಣುಕಿ ಮನ್ಮಥ ಪ್ರಿಯಾಂ
ಗನೆ ದೊರೆಯೆಂಬುದೆಂಬುದು ಪೆರದ್ದೊರೆಯೆಂಬುದೆ ಪೊಲ್ಲಿಕಬ್ಬೆಯೋಳ್[೩]

**ಲಕ್ಷಣ :** ಚಂಪಕಮಾಲಾ ವೃತ್ತವು ನಾಲ್ಕು ಪಾದಗಳ ಸಮವೃತ್ತ ಪದ್ಯ, ಪ್ರತಿ ಚರಣದಲ್ಲಿ ಇಪ್ಪತ್ತೊಂದು ಅಕ್ಷರಗಳಿರುವುದು ಹಾಗೂ ನ.ಜ.ಭ.ಜ.ಜ.ರ ಎಂಬ ಗಣಗಳಿವೆ. ಅಲ್ಲದೆ ೧೩ನೇ ಅಕ್ಷರದಲ್ಲಿ "ಯತಿ" ಮತ್ತು ಪ್ರತಿಯೊಂದು ಚರಣದ ಆದಿಯಲ್ಲಿ ನಾಲ್ಕು ಲಘು ಬಂದಿರುವುದರಿಂದ ಇದು ಚಂಪಕಮಾಲಾ ವೃತ್ತ ಎಲ್ಲ ನಿಯಮಗಳನ್ನು ಒಳಗೊಂಡಿರುತ್ತದೆ.

ಮುಖ್ಯವಾಗಿ ಲಿಪಿಯ ಆಧಾರದ ಮೇಲೆ ಕೆಲವೊಮ್ಮೆ ಸಾಕ್ಷಗಳ ಆಧಾರದ ಮೇಲೆ ಸುಮಾರು ೭–೮ ಶತಮಾನಗಳಿಗೆ ಸೇರಿದವರೆಂದು ಗೊತ್ತು ಮಾಡಿರುವ ಶ್ರವಣಬೆಳಗೋಳದ ಶಾಸನ ಪದ್ಯಗಳು ಭಾಷೆ ಛಂದಸ್ಸುಗಳ ದೃಷ್ಟಿಯಿಂದ ಈಚಿನ ವ್ಯಾಕರಣ ಛಂದಶಾಸ್ತ್ರಗಳ ಕಟ್ಟು ಕಟ್ಟಳೆಗಳಿಗೆ ಒಳಪಡುವ ರೀತಿಯ ರಚನೆಗಳನ್ನು ಅಲ್ಲಲ್ಲಿ ಮನಗಾಣುತ್ತವೆಂಬುದರಲ್ಲಿ ಸಂದೇಹವಿಲ್ಲ.

**ಶಾಸನದಲ್ಲಿ ಕಂದಪದ್ಯ :**

ಜತ್ತ ತಾಲೂಕಿನ ಉಮರಾಣಿ ಹಾಗೂ ಕೊಕಟನೂರ[೪] ಶಾಸನಗಳಲ್ಲಿ ಒಟ್ಟು ೨೦ ಕಂದ ಪದ್ಯಗಳು ಬಳಕೆಯಾಗಿರುವುದು ಗೊತ್ತಾಗುತ್ತದೆ. ಉದಾ: ಕೆಲವೊಂದು ಕಂದ ಪದ್ಯಗಳನ್ನು ಮಾತ್ರ ಅಧ್ಯಯನಕ್ಕೆ ಬಳಸಿಕೋಳ್ಳಲಾಗಿದೆ. ಕಂದ ಪದ್ಯವು ನಾಲ್ಕು ಸಾಲುಗಳ

ಒಂದು ಛಂದೋಬಂಧವಾಗಿದ್ದು ಹಳಗನ್ನಡ ಚಂಪೂ ಕಾವ್ಯಗಳಲ್ಲಿ ಬಳಕೆಯಾದಂತೆ ಶಾಸನಗಳಲ್ಲಿಯೂ ಬಳಕೆಗೊಂಡಿರುವುದು ಗಮನಾರ್ಹ. ಕನ್ನಡ ಸಾಹಿತ್ಯದ ರತ್ನತ್ರಯರಾದ ಪಂಪ, ರನ್ನ ಮತ್ತು ಪೊನ್ನರು ವೃತ್ತಗಳ ನಡುವೆ ಕಂದ ಪದ್ಯಗಳನ್ನು ವಿಶೇಷವಾಗಿ ಬಳಸಿಕೊಂಡಿದ್ದು ಕಂಡು ಬರುತ್ತದೆ. ಕಂದ ಸಂಸ್ಕೃತದಲ್ಲಿ ಆರ್ಯಗೀತ ಎನಿಸಿದರೂ ಪ್ರಾಕೃತದಲ್ಲಿ "ಸ್ಕಂದಕ" ಎನಿಸಿದ ಛಂದೋವಿಧಾನವು ಕನ್ನಡದಲ್ಲಿ ಕಂದವಾಗಿದೆ.[೬]

**ಲಕ್ಷಣ :** ಕಂದವು ನಾಲ್ಕು ಪಾದಗಳಿಂದ ಕೂಡಿದ ಅರ್ಧ ಸಮವೃತ್ತ ಪದ್ಯ ಮೊದಲನೆಯ ಮತ್ತು ಮೂರನೆಯ ಪಾದಗಳಲ್ಲಿ ನಾಲ್ಕು ಮಾತ್ರೆಯ ಮೂರು ಗಣಗಳು ಬರುತ್ತವೆ. ಎರಡನೆಯ ಮತ್ತು ನಾಲ್ಕನೇಯ ಪಾದಗಳಲ್ಲಿ ನಾಲ್ಕು ಮಾತ್ರೆಯ ಐದು ಗಣಗಳು ಬರುತ್ತವೆ. ಮೂರು ಐದು ಮತ್ತು ಏಳನೇಯ ವಿಷಯ ಸ್ಥಾನದಲ್ಲಿ "ಜ" ಗಣ ಬರಕೂಡದು ಎರಡು ಮತ್ತು ನಾಲ್ಕನೇಯ ಪಾದಗಳ ಕೊನೆಯ ಅಕ್ಷರವು ಕಡ್ಡಾಯವಾಗಿ ಗುರು ಆಗಿರಬೇಕು. ಆರು ಮತ್ತು ಹದಿನಾಲ್ಕನೇಯ ಸ್ಥಾನದ ಗಣವು ಮಧ್ಯಗಣವುಳ್ಳದಾಗಲಿ "ಜ" ಗಣ ಅಥವಾ ಸರ್ವ ಲಘು ಗಣವಾಗಲಿ ಆಗಿರಬೇಕು. ಮೊದಲಿನ ಹೃಸ್ವದ ಮುಂದೆ ಯತಿ ಇರುತ್ತದೆ.

ಈ ಮೇಲಿನ ಲಕ್ಷಣಕ್ಕೆ ಅನುಗುಣವಾಗಿ ಉಮ್ರಾಣಿ ಶಾಸನದಲ್ಲಿ ಬಳಕೆಯಾದ ಒಂದು ಕಂದ ಪದ್ಯವನ್ನು ಉದಾಹರಣೆಯಾಗಿ ತೆಗೆದುಕೊಳ್ಳಲಾಗಿದೆ.

ಭೂದಾನಂ ಗೃಹದಾನಂ
ಗೋದಾನಂ ವಸ್ತ್ರವಿತ್ತಭೋಜನ ಕನ್ಯಾಂ
ಭೋದಾನಪಿವಂ ಮಾಳ್ಪಂ
ಬಾದೇಂ ಶ್ರೀಂ ಕಲ್ಲಿಸೆಟ್ಟಿ ಪಿಪ್ರರ್ಗ್ಗೆಲ್ಲಂ[೭]

ಇನ್ನೂ ಕೊಕಟನೂರು ಶಾಸನದಲ್ಲಿ ಬಳಕೆಯಾಗಿರುವ ಕಂದ ಪದ್ಯವನ್ನು ಛಂದಸ್ಸಿನ ಹಿನ್ನೆಲೆಯಲ್ಲಿ ಒಂದು ಪದ್ಯ ಉದಾಹರಣೆಯಾಗಿ ಆಯ್ಕೆ ಮಾಡಿಕೋಳ್ಳಲಾಗಿದೆ. ಅದು ಈ ಕೆಳಗಿನಂತಿದೆ.

ಶಾಲೆಯ ಪರಿಸೂತ್ರದೋಳಾ
ತ್ಮಾಲಯಮುಂ ಮಾಡಿಕೊಳ್ವದಲ್ಲದೆ ಪೆರತೊ
ಸ್ಟಾಲಯ ದೊಳಿರ್ಪ್ಪವಂ ಪ್ರತಿ
ಕೂಲಂ. ಲೋಲಂ ನಿವಿಷ್ಟ ನಲ್ಲಂ ದುಷ್ಟಂ[೮]

**ಲಕ್ಷಣ :** ಮೊದಲನೆಯ ಮತ್ತು ಮೂರನೇಯ ಪಾದಗಳಲ್ಲಿ ನಾಲ್ಕು ಮತ್ತು ಮೂರು ಗಣ ಬಂದಿದೆ ಎರಡನೇಯ ಮತ್ತು ನಾಲ್ಕನೆಯ ಪಾದದಲ್ಲಿ ನಾಲ್ಕು ಮಾತ್ರೇಯ ಐದು ಗಣಗಳಿವೆ. ಮೂರು, ಐದು ಮತ್ತು ಏಳನೇಯ ವಿಷಮ ಸ್ಥಾನದಲ್ಲಿ "ಜ" ಗಣ ಬಂದಿರುವುದಿಲ್ಲಾ ಎರಡು ಮತ್ತು ನಾಲ್ಕನೆಯ ಪಾದಗಳ ಕೊನೆಯಲ್ಲಿ ಅಕ್ಷರ ಕಡ್ಡಾಯವಾಗಿ ಗುರು ಆಗಿದೆ. ಆರು ಮತ್ತು ಹದಿನ್ನಾಲನೆಯ ಸ್ಥಾನವು "ಜ" ಗಣ ಅಥವಾ ಸರ್ವ ಲಘು

ಆಗಿರಬೇಕೆಂಬ ನಿಯಮ ಆದರೆ ಇಲ್ಲಿ ಸರಿಯಾಗಿ "ಜ" ಗಣ ಬಂದಿದೆ. ಅಥಣಿ ತಾಲೂಕಿನ ಶಾಸನಗಳನ್ನು ಆದರಿಸಿ ಶಾಸನಗಳಲ್ಲಿ ಛಂದಸ್ಸನ್ನು ಅಧ್ಯಯನ ಮಾಡಲಾಗಿದೆ.

**ಶಾಸನಗಳ ಭಾಷಿಕ ಮಹತ್ವ :**

ಶಾಸನಗಳಿಂದ ಆಯಾ ಕಾಲಘಟ್ಟದಲ್ಲಾದ ಕೆಲವು ಮಹತ್ವದ ಭಾಷಿಕಾಂಶಗಳ ಬದಲಾವಣೆಗಳನ್ನು ತಿಳಿಯಬಹುದು. ಉದಾಹರಣೆಗೆ ಕರ್ನಾಟಕದ ಶಾಸನಗಳಿಗೆ ಕನ್ನಡ ಭಾಷೆಯ ಪ್ರಾರಂಭದ ಕಾಲದಲ್ಲಿ ಪ್ರಾಕೃತವು ಮಹತ್ವದ ಪರಿಣಾಮ ಬೀರಿದೆ ಎಂಬ ವಂಶವು ಕರ್ನಾಟಕದ ಆರಂಭದ ಶಾಸನಗಳಿಂದ ವೇದ್ಯವಾಗುತ್ತದೆ.

ಆರನೇಯ ಶತಮಾನದ ಸಂಸ್ಕೃತ ಶಾಸನಗಳಲ್ಲಿ ಕನ್ನಡ ಅಂಶಗಳು ಇನ್ನೂ ಹೆಚ್ಚಾಗಿವೆ. ಬರಬರುತ್ತಾ ಕನ್ನಡ ಶಾಸನಗಳ ಸಂಖ್ಯೆ ಹೆಚ್ಚಾದವಾದರೂ ಈ ಹೆಚ್ಚಳವು ಪ್ರಾಕೃತ ಶಾಸನಗಳನ್ನು ತಡೆದಂತೆ ಸಂಸ್ಕೃತ ಶಾಸನಗಳನ್ನು ತಡೆಯಲಿಲ್ಲ. ಹಲವಾರು ಸಂಸ್ಕೃತ ಶಾಸನಗಳ ಅಂತ್ಯದಲ್ಲಿ ಕನ್ನಡ ಬರಹವಿರುವುದು ಆರನೇ ಶತಮಾನದಿಂದ ಕಂಡುಬರುತ್ತದೆ. ಭೋಗಿವರ್ಮನ ತಗರೆಯ ಶಾಸನವನ್ನು ಇದಕ್ಕೆ ಉದಾಹರಣೆಯಾಗಿ ನೋಡಬಹುದು ಅದರ ಕೊನೆಯ ಐದು ಸಾಲುಗಳ ಬರಹ ಕನ್ನಡವಾಗಿದೆ. ಕನ್ನಡ ಶಾಸನಾರಂಭದಲ್ಲಿ ಸ್ವಸ್ತಿ, ನಮಸ್ತುಂಗ, ಶಿರಶ್ಚುಂಬಿ ವಚನ ಅಥವಾ ದೇವತಾಸ್ತುತಿ ಅನಂತರ ಬರುವ ಸಂಸ್ಕೃತ ದೀರ್ಘ ಸಮಾಸದ ಬಿರುದಾವಳಿ ಹಾಗೂ ಅಂತ್ಯಂದಲ್ಲಿ ಪುರಾಣಾದಿಗಳ ಎತ್ತಿದ ಫಲಶೃತಿ ಇಷ್ಟು ಶತಮಾನಗಳ ವರೆಗೆ ಶಾಸನಿಕ ಕನ್ನಡ ವೈಶಿಷ್ಟ್ಯಗಳೆನಿಸಿಕೊಂಡಿವೆ. ಮೇಲಿನ ಲಕ್ಷಣಗಳಿಗೆ ಪೂರಕವೆನ್ನುವಂತೆ ತೆಲಸಂಗ, ಕೊಕಟನೂರ, ಐನಾಪೂರದ ಹಾಗೂ ಇತರ ಶಾಸನಗಳಲ್ಲಿ ಈ ರೀತಿಯಾದ ಸಂಸ್ಕೃತ ಭೂಯಿಷ್ಠ ಆರಂಭಿಕ ಶ್ಲೋಕಗಳೊಂದಿಗೆ ಶಾಸನಗಳ ರಚನೆ ಆರಂಭವಾಗಿರುವುದು ಕನ್ನಡ ಶಾಸನಗಳಲ್ಲಿ ಕಂಡುಬರುತ್ತದೆ.

**ಕೊನೆ ಟಿಪ್ಪಣಿಗಳು :**

೧. ಶ್ರೀ ಬರಗೂರು ರಾಮಚಂದ್ರಪ್ಪ ಸಂ.ಕರ್ನಾಟಕ ಸಂಗಾತಿ (ಚನ್ನಕ್ಕ ಪಾವಟೆ ಅವರ ಲೇಖನ) ಪುಟ ೧೯೨-೨೦೦೨.

೨. ಗುರವ ಆರ್.ಎನ್.ಕರ್ನಾಟಕ ಭಾರತಿ ಸಂ. ೩ ಸಂಚಿಕೆ ೨ ೧೯೭೦ ಕೊಕಟನೂರು ಶಾಸನ ತಾಲೂಕ ಅಥಣಿ.

೩. ಅದೇ

೪. ಅದೇ

೫. ಅದೇ ಕೊಕಟನೂರು ಶಾಸನ ಕ್ರಿ.ಶ.೧೦೫೦ ತಾಲೂಕ ಅಥಣಿ ಕರ್ನಾಟಕ ಭಾರತಿ ಸಂಪುಟ-೩ ಸಂ. ೨, ೧೯೭೦.

೬. ಜಯರಾಮ ವ್ಹಿ. ಪ್ರಾಚೀನ ಕನ್ನಡ ಶಾಸನಗಳ ಸಾಹಿತ್ಯ ಅಧ್ಯಯನ ಪುಟ ೬೬-೨೦೦೮.

೭. ಗುರವ ಆರ್.ಎನ್. 'ಉಮರಾಣಿ ಶಾಸನ' ಕ್ರಿ.ಶ. ೩೬೫ ತಾಲೂಕ ಜತ್ತ ಕರ್ನಾಟಕ ಭಾರತಿ ಸಂಪುಟ ೪ ಸಂಚಿಕೆ ೧ ೧೯೭೦.

೮. ಗುರವ ಆರ್.ಎನ್. ಕೊಕಟನೂರು ಶಾಸನ ಕ್ರಿ.ಶ.೧೦೫೦ ತಾಲೂಕ ಅಥಣಿ ಕರ್ನಾಟಕ ಭಾರತಿ ಸಂಪುಟ ೩ ಸಂ.೨-೧೯೭೦.

# ಅಧ್ಯಾಯ-೪

## ಅಥಣಿ ತಾಲೂಕಿನ ಶಾಸನಗಳ ಸಾಂಸ್ಕೃತಿಕ ಪ್ರಾಮುಖ್ಯತೆ

### ಶಾಸನದ ಅರ್ಥ, ವ್ಯಾಖ್ಯೆ ಪ್ರಕಾರಗಳು :

ಒಂದು ನಾಡು ಎಂದರೆ ಕೇವಲ ಅದನ್ನಾಳಿದ ರಾಜರಷ್ಟೇ ಅಲ್ಲ. ಅಲ್ಲಿ ಬದುಕಿ ಬಾಳಿದ ಜನವೂ ಕೂಡ ಆ ಜನತೆ ಬದುಕಿದ ರೀತಿ ಅನುಸರಿಸಿದ ಧರ್ಮ, ಕಟ್ಟಿದ ಕಲೆ ಅವರ ಜೀವನದ ಸಮಸ್ಯೆಗಳು, ಮೌಲ್ಯಗಳು ಇತ್ಯಾದಿಗಳ ವಿವರಣೆಯೇ ಆ ದೇಶದ ಇತಿಹಾಸ ಜನತೆಯ ಜೀವನವನ್ನು ಕುರಿತಾದ ಇಂತಹ ಅಧ್ಯಯನವನ್ನು ಸಾಂಸ್ಕೃತಿಕ ಅಧ್ಯಯನವೆಂತಲೂ ಕರೆಯಬಹುದು.

ಶಾಸನಗಳ ಪ್ರಕಾರಗಳನ್ನು ಗಮನಿಸಿದಾಗ

೧) ದಾನ ಶಾಸನ
೨) ಪ್ರಶಸ್ತಿ ಶಾಸನ
೩) ವೀರಗಲ್ಲು
೪) ತುರುಗೋಳ್
೫) ಮಾಸ್ತಿ ಕಲ್ಲು
೬) ನಿಷದಿ ಕಲ್ಲು
೭) ಯುಪ ಶಾಸನ
೮) ಕೂಟ ಶಾಸನ

ಶಾಸನ ಎಂಬ ಪದವು "ಶಾಸ್" ಎಂಬ ಧಾತುವಿನಿಂದ ರೂಪಗೊಂಡಿದೆ ಇದರ ಅರ್ಥ ಆಜ್ಞಾಪಿಸು, ಶಿಕ್ಷಿಸು, ನಿಯಂತ್ರಿಸು ಎಂದು ಶಾಸನಗಳು ಮೂಲತ: ದಾನ ಸಂಬಂಧವಾದ ರಾಜಾಜ್ಞೆಗಳಾಗಿದ್ದು ಕಾಲಾನುಕ್ರಮದಲ್ಲಿ ವಿಶಾಲ ಅರ್ಥವನ್ನು ಪಡೆದುಕೊಂಡವು, ಹಾಗೆಯೇ ಇವುಗಳನ್ನು ಸಾಮಾನ್ಯ ಅರ್ಥದಲ್ಲಿ ಹೇಳುವುದಾದರೆ ಕಲ್ಲು, ತಾಮ್ರ, ಬೆಳ್ಳಿ, ಶಂಖ, ದಂತ, ಮಣ್ಣಿನ ಮಡಿಕೆ, ಮರ ಪ್ರಾಣಿಗಳ ಚರ್ಮ ಮುಂತಾದ ವಸ್ತುಗಳ ಮೇಲೆ ಬರೆಯಲಾದ ಬರವಣಿಗೆಗಳನ್ನು ಶಾಸನವೆಂದು ಹೇಳುತ್ತೇವೆ. "ಶಾಸನಕ್ಕೆ ಸಮಾನಾರ್ಥವಾಗಿ ಬಳಕೆಯಾಗುತ್ತಿರುವ ಪದ" Inscription ಇದನ್ನು Epigraph ಎಂದು ಕರೆಯಲಾಗುತ್ತದೆ ಆದುದರಿಂದಲೇ Epigraphy ಎಂಬ ಪದ ಬಳಕೆಯಲ್ಲಿದೆ.

Incription ಎಂದರೆ ಬಹುಕಾಲ ನಿಲ್ಲಬಲ್ಲ ಶಾಶ್ವತವಾಗಿ ಉಳಿಯಬಲ್ಲ ವಸ್ತುಗಳ ಮೇಲೆ ಕೊರೆಯಲ್ಪಟ್ಟ ಬರಹಗಳೇ ಶಾಸನಗಳು.

ಭಾರತೀಯರು ಸಹ ಶಾಸನ ಎಂಬ ಪದಕ್ಕೆ ವಿಶಾಲ ಅರ್ಥವನ್ನು ನೀಡುವುದರ ಸಲುವಾಗಿ ಅವುಗಳ ಆಂತರಿಕ ವಿಷಯಗಳನ್ನು ಗಮದಲ್ಲಿರಿಸಿಕೊಂಡು ವ್ಯಾಖ್ಯಾನಿಸಿದರು. ಹೀಗಾಗಿ ಶಾಸನವೆಂಬುದು ಆಜ್ಞೆ ಪ್ರಜೆಗಳೆಲ್ಲರೂ ಪಾಲಿಸಬೇಕಾದ ಒಂದು ಸಂಹಿತೆ ಸಂವಿಧಾನ ನೀತಿ-ನಿಯಮಗಳನ್ನು ಉಲ್ಲಂಘಿಸಿದರೆ ಶಿಕ್ಷೆಗೆ ಗುರಿಯಾಗುತ್ತಿರೆಂಬ ಎಚ್ಚರಿಕೆಯ

ನೀತಿ ಸಂಹಿತೆಗಳು ಎಂಬ ವಿಶಾಲಾರ್ಥವನ್ನು ಪಡೆದುಕೊಂಡಿತು. "Inscribe" ಎಂಬುದರಿಂದ ಹೊರಟ ಕತ್ತು, ಕೊರೆ, ಕಂಡರಿಸು ಎಂಬ ಅರ್ಥಕ್ಕಿಂತ ಭಿನ್ನವಾಗಿ ಆಡಳಿತ, ಪ್ರಭುತ್ವ, ಆಜ್ಞೆ, ಅಪ್ಪಣೆ, ಕಾನೂನು, ಕಟ್ಟಳೆ, ವಿಧಿ, ನಿಗ್ರಹ, ಹಿಡಿತ, ಶಿಕ್ಷೆ, ದಂಡನೆ, ಶಾಸ್ತ್ರ, ಒಪ್ಪಂದ ಮತ್ತು ಕರಾರು ಎಂಬ ವ್ಯಾಪಕ ಅರ್ಥವನ್ನು ಶಾಸನ ಪಡೆದುಕೊಂಡಿತು.

ರಾಜನ ಸಹಿ, ಮುದ್ರೆ ದಿನಾಂಕದೊಂದಿಗೆ ಅಧಿಕೃತವಾಗಿ ಹೋರಾಟ ಶಾಸನಗಳು ಶಿಲೆ, ತಾಮ್ರ, ಕಬ್ಬಿಣ ಇತ್ಯಾದಿ ಮಾಧ್ಯಮಗಳಲ್ಲಿ ಬರೆದಿರುವ ರಾಜಾಜ್ಞೆಗಳಾಗಿದ್ದಂತೆ ರಾಜರಲ್ಲದವರೂ ಬಯಸಿದಾಗಲೂ ಕೂಡ ಶಾಸನಗಳೆಂದು ಪರಿಗಣಿತವಾದವು, ವೀರರ, ಮಹಾಸತಿಯ, ಸನ್ಯಾಸಿಗಳ ಮರಣ ವೃತ್ತಾಂತವನ್ನು ಉಲ್ಲೇಖಿಸುವ ವೀರಗಲ್ಲು ಮಾಸ್ತಿಕಲ್ಲು, ನಿಷದಿ ಕಲ್ಲುಗಳು ಸಹಶಾಸನದ ಪರಂಪರೆಗೆ ಸೇರಿದವು ಇವುಗಳನ್ನು ಹೊರತುಪಡಿಸಿ ಶುದ್ಧಕಾವ್ಯ ನಾಟಕ, ವ್ಯಾಕರಣ, ಸಂಗೀತ ಮುಂತಾದ ಯಾವ ಪ್ರಕಾರವೇ ಆಗಲಿ ಶಿಲೆಯ ಮೇಲಿದ್ದರೆ ಅದು ಸಹ ಶಾಸನವೆಂಬ ಹೆಸರನ್ನು ಪಡೆಯಿತು. ಹೀಗೆ ರಾಜ ಪ್ರಭುತ್ವ ಪರಿಸರದಲ್ಲಿ ಬೆಳೆದು ಬಂದ ಶಾಸನಗಳು, ದಂಡನೆ, ಶಿಕ್ಷೆ, ಕರಾರು, ಕಟ್ಟಳೆ ಎಂಬ ಸಂಕುಚಿತ ಅರ್ಥದಿಂದ ಹೊರಬಂದು ಅಂದಿನ ಜನರ ಜೀವನ ಪದ್ಧತಿಯ ಎಲ್ಲ ಮುಖಗಳನ್ನು ಕಾಯ್ದುಕೊಂಡು ಬಂದ ದಾಖಲೆಗಳೆಂಬ ವಿಶಾಲಾರ್ಥವನ್ನು ಪಡೆದುಕೊಂಡವು.

ಶಾಸನದ ವ್ಯಾಖ್ಯೆ ಗಮನಿಸಿದಾಗ–ಶಾಸನಗಳು ಪ್ರಮುಖವಾಗಿ ಒಂದು ಕಾಲದಲ್ಲಿ ವ್ಯವಹಾರಗಳ ಲಿಖಿತ ದಾಖಲೆಗಳು, ನಾಡಿನ ರಾಜಕೀಯ, ಸಾಂಸ್ಕೃತಿಕ, ಸಾಮಾಜಿಕ, ಆರ್ಥಿಕ, ಧಾರ್ಮಿಕ ಅಂಶಗಳನ್ನು ಅರ್ಥಮಾಡಿಕೋಳ್ಳುವ ಮೂಲ ಸಾಮಗ್ರಿಗಳಾಗಿವೆ. ಎಂಬ ಸಿ.ನಾಗಭೂಷಣರವರ ಮಾತಿನಂತೆ ನೋಡಿದರೆ ಮೊದಲು ಶಾಸನಗಳು ರಾಜಾಜ್ಞೆಗೆಂದು ಮೀಸಲಾಗಿದ್ದವು ಆದರೆ ಕಾಲಾಂತರದಲ್ಲಿ ದಾನದ ವಿಷಯ ಹಾಗೂ ದಾನ ನೀಡಿದ ವಿಷಯ, ವಂಶದ ವರ್ಣನೆ, ಮಡಿದ ವೀರರ ಶೌರ್ಯ, ರಾಜರ ಲೋಕೊಪಯೋಗಿ ಕಾರ್ಯ ಹೀಗೆ ಅನೇಕ ವಿಷಯಗಳನ್ನು ಒಳಗೊಂಡವು ಈ ಕುರಿತು ಡಾ. ಎಂ. ಚಿದಾನಂದಮೂರ್ತಿಯವರು ಶಾಸನಗಳು ಪ್ರಾಚೀನ ಕರ್ನಾಟಕದ ಸಾಹಿತ್ಯ, ಧರ್ಮ, ಮತ್ತು ಸಾಮಜಗಳಿಗೆ ಹಿಡಿದ ಶೀಲಾದರ್ಪಣಗಳೆನಿಸಿವೆ ಎಂದಿದ್ದಾರೆ. ಪ್ರಾಚೀನ ಶಾಸನಗಳಲ್ಲಿ ರಾಜ ಮನೆತನ, ರಾಜನ ಹೆಸರು, ದತ್ತಿಯ ಕಾಲ, ದತ್ತಿಯ ವಿವರ ಮಾತ್ರ ಬರೆಯುತ್ತಿದ್ದರು ಬರ ಬರುತ್ತಾ ಶಾಸನಕಾರರು ಅದರಲ್ಲಿ ದೇವತಾ ಸ್ತುತಿ, ದೇಶದ ವರ್ಣನೆ, ಆಧಾರ ರಾಜ. ಅವನ ಅಧಿಕಾರ, ದಾನವನ್ನು ಸ್ವೀಕರಿಸುವವನ ಪಾಂಡಿತ್ಯ ಜನರ ನೀತಿಯ ಮಟ್ಟ, ಆದರ್ಶ, ಬುದ್ಧಿವಂತಿಕೆ ಇತ್ಯಾದಿ ಶಾಸನಗಳಲ್ಲಿ ಬರೆಯತೊಡಗಿದರು. ಪ್ರಸ್ತುತ ಅಥಣಿ ತಾಲೂಕಿನ ಶಾಸನಗಳ ಸಾಂಸ್ಕೃತಿಕ ವಿಚಾರಗಳನ್ನು ವಿವರಿಸುವುದು ಇಲ್ಲಿನ ಮುಖ್ಯ ಉದ್ದೇಶವಾಗಿದೆ.

**ಸಾಮಾಜಿಕ ವ್ಯವಸ್ಥೆ :–**

**ಚಾತುರ್ವರ್ಣ :**

ಪ್ರಾಚೀನ ಕಾಲದಿಂದಲೂ ಭಾರತದ ಸಾಮಾಜಿಕ ವ್ಯವಸ್ಥೆಯು ಚಾತುರ್ವರ್ಣಗಳಾಗಿ ರೂಪಗೊಂಡ ಉಲ್ಲೇಖವು ಋಗ್ವೇದದ ಪುರುಷ ಸೂಕ್ತದಲ್ಲಿದೆ. ಪುರುಷ ಸೂಕ್ತದ ಕಾಲವನ್ನು ಅಥರ್ವಣ ವೇದಕಾಲದ ಕೊನೆಯ ಭಾಗವೆಂದು ವಿದ್ವಾಂಸರು ನಿರ್ಧರಿಸಿರುತ್ತಾರೆ.[1] ಋಗ್ವೇದದ ಅನೇಕ ಮಂತ್ರಗಳಲ್ಲಿ ಸಮಾಜವನ್ನು ಬ್ರಹ್ಮ, ಕ್ಷತ್ರ, ವೈಶ್ಯ ಮತ್ತು ಶೂದ್ರವೆಂದು ವಿಭಾಗಿಸಿರುವುದು ಕಂಡುಬರುತ್ತದೆ. ಈ ವರ್ಗ ವ್ಯವಸ್ಥೆಯಲ್ಲಿಅಂತಹ ಕಠೋರ ನಿಯಮಗಳೇನೂ ಇರಲಿಲ್ಲ. ಶೂದ್ರರನ್ನು ಬಿಟ್ಟು ಉಳಿದವರು ಯಾವ ವರ್ಗವನ್ನು ಬೇಕಾದರೂ ಸೇರುವ ಸೌಲಭ್ಯವಿದ್ದಿತು. ಈ ವರ್ಗ ವಿಭಜನೆಯು ಹುಟ್ಟಿಗಿಂತ ಹೆಚ್ಚಾಗಿ ವೃತ್ತಿಯನ್ನವಲಂಬಿಸಿ ಮೂಡಿತು.[2] ನಂತರದಲ್ಲಿ ವಿವಿಧ ವೃತ್ತಿಗಳಲ್ಲಿನ ಭೇದವು ಸಾಮಾಜಿಕವಾಗಿ ಮೇಲು ಕೀಳು ಭಾವನೆಗೆಡೆಮಾಡಿ ಚಾತುರ್ವರ್ಣಗಳಿಗೆ ಹಾದಿ ಮಾಡಿಕೊಟ್ಟಿರುವಂತಿದೆ. ಈ ವ್ಯವಸ್ಥೆ ಬ್ರಾಹ್ಮಣಗಳ ಕಾಲಕ್ಕೆ ಇನ್ನಷ್ಟುಬಿಗಿಗೊಳಿಸಲ್ಪಟ್ಟು ವೃತ್ತಿ ವ್ಯತ್ಯಾಸ ಹಿಮ್ಮೆಟ್ಟಿ ವ್ಯಕ್ತಿಯ ಹುಟ್ಟು, ವರ್ಣವನ್ನು ನಿರ್ಣಯಿಸುವಂತಾಯಿತು.[3]

**ವರ್ಗ – ವರ್ಣ :**

ಬ್ರಾಹ್ಮಣಗಳ ಕಾಲದಲ್ಲಿ ವರ್ಗವ್ಯವಸ್ಥೆಯನ್ನು ವರ್ಣ ವ್ಯವಸ್ಥೆಯೆಂದು ಕರೆದು ಅದನ್ನು ಬಿಗಿಗೊಳಿಸಲಾಯಿತು. ಅಲ್ಲದೆ ವ್ಯಕ್ತಿಯ ವರ್ಣವನ್ನು ನಿರ್ಣಯಿಸುತ್ತಿದ್ದುದು ಅವನ ಹುಟ್ಟೇ ಹೊರೆತು ವೃತ್ತಿಯಲ್ಲ.ಪ್ರಾಚೀನ ಕರ್ನಾಟಕದಲ್ಲಿ ವರ್ಣ ಪದ್ಧತಿಯ ಪರಿಪಾಲನೆಯು ಬಹುಮಟ್ಟಿಗೆ ಕುಸಿದು ಹೋಗಿ ಕುಲ ಮತ್ತು ವೃತ್ತಿ, ಸಮಾಜದಲ್ಲಿ ಮೇಲು – ಕೀಳು ಎಂಬ ವರ್ಗಭೇದವನ್ನು ಹುಟ್ಟುಹಾಕಿರುವುದು ಗಮನಕ್ಕೆ ಬರುತ್ತದೆ.

**ಪ್ರಭುವರ್ಗ :**

ಮಧ್ಯಕಾಲೀನ ಕರ್ನಾಟಕದ ಸಾಮಾಜಿಕ ವ್ಯವಸ್ಥೆಯಲ್ಲಿ ಪ್ರಮುಖವಾಗಿ ಪ್ರಭುವರ್ಗ ಮತ್ತು ಶ್ರಮಿಕ ವರ್ಗಗಳಿರುವುದನ್ನು ಕನ್ನಡ ಶಾಸನ ಅಧ್ಯಯನ ಮಾಡಿದ ವಿದ್ವಾಂಸರು ಇದುವರೆಗೆ ಪ್ರಸ್ತಾಪಿಸುತ್ತಲೇ ಬಂದಿದ್ದಾರೆ. ಇಲ್ಲಿ ಪ್ರಭುವರ್ಗ ಪುರೋಹಿತ, ರಾಜ ಹಾಗೂ ವಿವಿಧ ಅಧಿಕಾರಿಗಳನ್ನೊಳಗೊಂಡರೆ ಶ್ರಮಿಕವರ್ಗ ವಿವಿಧ ವೃತ್ತಿಗಳನ್ನು ಕೈಕೊಂಡ ಜನಸಾಮಾನ್ಯರನ್ನು ಪ್ರತಿನಿಧಿಸುತ್ತದೆ.[4] ಇದನ್ನು ಅಥಣಿ ನಾಡಿನ ಸಾಮಾಜಿಕ ವ್ಯವಸ್ಥೆಗೂ ಅನ್ವಯಿಸಿ ಹೇಳಬಹುದು.

**ಮಹಾಜನರು :**

ಸಮಾಜ ವ್ಯವಸ್ಥೆಯ ಉನ್ನತ ಸ್ತರದಲ್ಲಿರುವವರು ಪುರೋಹಿತ ವರ್ಗ ಅಥವಾ ಮಹಾಜನರು. ಅಗ್ರಹಾರದಲ್ಲಿರುವ ಬ್ರಾಹ್ಮಣರನ್ನು ಮಹಾಜನರೆಂದು ಕರೆಯುತ್ತಿದ್ದರು. ಪ್ರಾಚೀನ ಕರ್ನಾಟಕದಲ್ಲಿ ಬ್ರಾಹ್ಮಣರು ಅತ್ಯಂತ ಪ್ರಭಾವಶಾಲಿಗಳಾಗಿದ್ದು, ಜಾತಿಗಳಲ್ಲೆಲ್ಲ ಬ್ರಾಹ್ಮಣ ಜಾತಿಯೇ ಉತ್ತಮವಾದುದು ಎಂದು ಪಂಪನು ಪ್ರಸ್ತಾಪಿಸಿದ್ದಾನೆ.[೫] ಮಹಾಜನರು ಅಂದಿನ ಸಮಾಜದಲ್ಲಿ ಪ್ರತಿಷ್ಠಿತರೆನಿಸಿದ್ದರು. ಯಜನ, ಯಾಜನ ಅಧ್ಯಯನ, ಅಧ್ಯಾಪನ, ದಾನ ಪ್ರತಿಗ್ರಹಣ ಇವು ಅವರ ಪ್ರಮುಖ ಕರ್ತವ್ಯಗಳಾಗಿದ್ದವು. ಊರಿನಲ್ಲಿ ಯಾವ ಕಾರ್ಯನಡೆದರೂ ಅದು ಮಹಾಜನರ ಸನ್ನಿಧಿಯಲ್ಲಿ ನಡೆಯುತ್ತಿತ್ತು.ಗ್ರಾಮ ಕಾರ್ಯನಿಮಿತ್ತವಾಗಿ ಯಾರಾದರೂ ಹಣವನ್ನೋ, ಭೂಮಿಯನ್ನೋ, ದಾನ ಮಾಡಿದರೆ ಅದನ್ನು ಇವರು ಸ್ವೀಕರಿಸುತ್ತಿದ್ದರು. ಅಷ್ಟೇ ಅಲ್ಲ ಅದನ್ನು ರಕ್ಷಿಸುತ್ತಿದ್ದವರು, ವಿನಿಯೋಗ ಮಾಡುತ್ತಿದ್ದವರು ಇವರೇ ಆಗಿದ್ದರು. ಭೂಮಿಯನ್ನು ದತ್ತಿಯಾಗಿ ಕೊಟ್ಟಿದ್ದರೆ, ಅದನ್ನು ಉಳುಮೆಗೆ ಕೊಡುವುದು, ಅದರಿಂದ ಬರುವ ಆದಾಯವನ್ನುನಿರ್ದಿಷ್ಟ ಧಾರ್ಮಿಕ ಕಾರ್ಯಕ್ಕಾಗಿ ಬಳಸುವುದು ಮಹಾಜನರ ಕರ್ತವ್ಯವಾಗಿದ್ದಿತು.[೬] ಮಹಾಜನರು ವಿದ್ವಾಂಸರಾಗಿದ್ದು, ವೇದಾಂಗ ಪಂಡಿತರಾಗಿದ್ದ ಸಂಗತಿಯನ್ನು ಕರ್ನಾಟಕ ನಾಡಿನ ಅನೇಕ ಶಾಸನಗಳು ಉಲ್ಲೇಖಿಸಿವೆ. ಜತ್ತ ತಾಲೂಕಿನ ಕ್ರಿ.ಶ.೧೧೬೧ ರ ಬಿಜ್ಜಲ ದೇವನ ಉಮರಾಣಿ ಶಾಸನವು ಮಹಾಜನರನ್ನು ಕುರಿತು

ಶ್ರೀ ಮಾನಣ್ಣೆಲಸಿರ್ಪ್ಪ
ಭ್ರೂಮಹಿತ ಮಹಾಜನಂಗಳಂತಾಪುರದೋಳ್
ಶ್ರೀಮತ್ ಕೀರ್ತಿ ವಿಶಾಳರರುಜ್ವಳ ಚರಿತೋದ್ ಭಾಸಿಗಳ್ ರುಗ್ವೇಜು
ರ್ಸ್ಯಾ (ಸ್ಸಾ) ಮಾಥರ್ಬ್ಬಣ ವೇದ ಪಾರಗರಿಳಾಧೀಶಾರ್ಚ್ಚಿತರ್ಸ್ಸತ್ಯಸತ್
ಸೀಮಾಸ್ತೋಮ ರೆನಿಪ್ಪರಾ ವಸುಮತೀ ದೇವರ್ಕ್ಕಳ್‍ತ್ಯೂರ್ಜಿತರ್[೭]

ಎಂದು ವೇದ ಪಾರಾಂಗತರಾಗಿದ್ದನ್ನು ಉಲ್ಲೇಖಿಸಿದರೆ ತೆಲಸಂಗದ ಶಾಸನವು[೮] ತೆಲಸಂಗ "ಶ್ರೀ ಮನುಮಹಾಗ್ರಹಾರಂ ತೆಲಸಂಗ(ವ)ದ ಮಹಾಜನಂಗಳೆರಡಯ್ನೂ(ರ್ವ) ಸ್ವಾಮಿಗಳುಂ" ಎಂದು ಮಹಾಜನರ ಸಂಖ್ಯೆಯನ್ನು ಹೇಳದೆ. ಕ್ರಿ. ಶ. ೧೧೬೭ರ ರಾಮತೀರ್ಥ ಶಾಸನವು[೯] ರಾಮತೀರ್ಥ ಕೊಟ್ಟಲಿಗೆ ಅಗ್ರಹಾರದ ಮಹಾಜನಂಗಳು ಭುಜಬಲ ಚಕ್ರವರ್ತಿ ಬಿಜ್ಜಳದೇವನ ಹೇಳಕೆಯಂತೆ ತೀರ್ಥದ ಸ್ವಯಂಭು ರಾಮೇಶ್ವರ ದೇವರ ಹಾಲುಮಂಡಿಗೆಗೆ ಎರಡು ಮತ್ತರು ಹೊಲವನ್ನು ದಾನನೀಡಿದ್ದನ್ನು ಉಲ್ಲೇಖಿಸಿರುವುದರಿಂದ ಮಹಾಜನಂಗಳು ಕೇವಲ ದಾನವನ್ನು ಸ್ವೀಕಾರಮಾಡುವದಲ್ಲದೆ ದಾನವನ್ನು ನೀಡುತ್ತಿದ್ದರು ಎಂಬ ಅಂಶ ಸ್ಪಷ್ಟವಾಗುತ್ತದೆ. ಬಾಡಗಿ ಶಾಸನವು ವಾಸಿಷ್ಟಗೋತ್ರ ಉಭಯದರುಶನಾದಿ ಋಗ್ವೇದ ಚೂಡಾಮಣಿ ವಾಜಪೆಯಾಜಿ

ಬಸವಣಭಟ್ಟೋಪಾಧ್ಯಾಯರು, ಜಾತವೇದ ಘಳಿಸಾಸ ಆದಿತ್ಯ ಭಟ್ಟರು, ಕಾಶ್ಯಪಗೋತ್ರ, ಚೂಡಾಮಣಿ ನಾಗದೇವ ಭಟ್ಟೋಪಾಧ್ಯಾಯರ ಮಗ ಗೋವಿಂದಭಟ್ಟರನ್ನುಉಲ್ಲೇಖಿಸುತ್ತದೆ.

ಸಮಾಜದಲ್ಲಿ ಉಚ್ಛಸ್ಥಾನವನ್ನು ಹೊಂದಿದ್ದ ಮಹಾಜನರು ಒಂದೊಂದು ಊರಿನ ಪ್ರಭುತ್ವವನ್ನು ಅನುಭವಿಸುತ್ತಿದ್ದ ಸಂಗತಿಯನ್ನು ಬಾಡಗಿ ಶಾಸನವು[೧೦] "ಚಕ್ರಿ ಭಟ್ಟೋಪಾಧ್ಯಯರ ಪುತ್ರರಪ್ಪ ಚೌಡಭಟ್ಟೋಪಾಧ್ಯಯರುಂ ತುಂಗಳ ಮತ್ತು ಬಾಡಗಿಯ ಪ್ರಭುತ್ವ ಅನುಭವಿಸುತ್ತಿರಲು" ಎಂದಿದೆ. ಬ್ರಾಹ್ಮಣರು ರಾಜಕೀಯದಲ್ಲಿ ಪ್ರಮುಖಸ್ಥಾನ ಪಡೆದಿದ್ದರು ಎಂಬುದು ಉಮ್ರಾಣಿ ಶಾಸನದಿಂದ ತಿಳಿಯುತ್ತದೆ. ಅದು ವಿಶ್ವಾಮಿತ್ರಗೋತ್ರಪ್ಪುವ ಮಧುವರಸನ ಮಗ ದೇವರಸನು ರಾಯಮುರಾರಿ ಸೋವಿದೇವನ ಪಾದಪದ್ಮೋಪ ಜೀವಿಯಾಗಿದ್ದನೆಂಬುದು ಸ್ಪಷ್ಟಪಡಿಸುತ್ತದೆ.[೧೧] ಇದರಿಂದ ಬ್ರಾಹ್ಮಣರು ಕೇವಲ ಪೌರೋಹಿತ್ಯದಲ್ಲಿ ಮಾತ್ರ ತೊಡಗಿಸಿಕೊಳ್ಳದೆ ರಾಜಕೀಯದಲ್ಲಿಯೂ ಭಾಗವಹಿಸುತ್ತಿದ್ದುದಾಗಿ ತಿಳಿದು ಬರುತ್ತದೆ.

ಬ್ರಾಹ್ಮಣರಿಗೆ ತಮ್ಮದೇ ಆದ ಗೋತ್ರಗಳಿರುತ್ತಿದ್ದವು ಎಂಬ ಅಂಶ ಅಥಣಿ ತಾಲೂಕಿನ ಶಾಸನಗಳಲ್ಲಿಯೂ ಕಾಣಬರುತ್ತದೆ. ಬಾಡಗಿ ಶಾಸನ[೧೨] ವಿಶ್ವಾಮಿತ್ರಗೋತ್ರ ಚೌಡಭಟ್ಟೋಪಾಧ್ಯಾಯ, ವಾಶಿಷ್ಟಗೋತ್ರ ಬಸವಣ್ಣ ಭಟ್ಟೋಪಾಧ್ಯಾಯ, ಬಾದರಾಯಣ ಗೋತ್ರ ಚೌಡಸಾನಿಯ ಪಟ್ಟವರ್ಧ, ಕಾಶ್ಯಪಗೋತ್ರ ಚೂಡಾಮಣಿ ನಾಗದೇವ ಭಟೋಪಾಧ್ಯಾಯರನ್ನು ಹೆಸರಿಸುತ್ತದೆ. ಮೂಲ ಋಷಿಗಳು ಏಳು ಜನ ಅವರಲ್ಲಿ ನಾಲ್ವರು ಮೂಲ ಪುರುಷರು ಈ ನಾಲ್ವರಿಂದ ಹದಿನೇಂಟ್ಟು ಪ್ರತೇಕ ಪಂಗಡಗಳು ಹುಟ್ಟಿದವು. ಋಷಿ ಗೋತ್ರಗಳು ಒಂದೇ ಆಗಿದ್ದರೆ ಆ ಕುಟುಂಬಗಳಲ್ಲಿ ಪರಸ್ಪರ ಮದುವೆಗೆ ಅವಕಾಶವಿರಲಿಲ್ಲ[೧೩] ಮೂಲ ಏಳು ಋಷಿಗಳಾದ ಭೃಗು, ಪರಾಶರ, ಪುಲಸ್ತ್ಯ, ಗೌತಮ, ವಾಸಿಷ್ಟ, ಭಾರದ್ವಾಜ, ಮತ್ತು ಅಂಗೀರಸರನ್ನು ಅಥಣಿ ತಾಲೂಕಿನ ಬಳ್ಳಿಗೇರಿ[೧೪] ಶಾನಸ ಹೆಸರಿಸಿದೆ ಮಹಾಜನರು ಅಗ್ರಹಾರವನ್ನು ಉಪಭೋಗಿಸುತ್ತಿದ್ದರಲ್ಲದೆ ಅನೇಕ ಸಾಮಾಜಿಕ, ಧಾರ್ಮಿಕ ಮತ್ತು ರಾಜಕೀಯ ಕಾರ್ಯದಲ್ಲಿ ನಿರತರಾಗಿದ್ದ ಅಂಶ ಸ್ಪಷ್ಟವಾಗುತ್ತದೆ. ಇವರು ವಿವಿಧ ದೇವಾಲಯಗಳಗೆ ದಾನ ಬಿಟ್ಟಿದ್ದಾರೆ ಮತ್ತು ಬೇರೆಯವರು ಬಿಟ್ಟ ದತ್ತಿಯನ್ನು ಚ್ಯುತಿ ಬರದ ಹಾಗೆ ಪಾಲಿಸಿದ್ದಾರೆ.

**ಅಗ್ರಹಾರಗಳು:**

ಸಾಮಾಜಿಕ ವ್ಯವಸ್ಥೆಯಲ್ಲಿ ಅಗ್ರಹಾರಗಳು ಬಹು ವಿಶಿಷ್ಟವಾದ ಸ್ಥಾನವನ್ನಲಂಕರಿಸಿವೆ. ಅಗ್ರಹಾರ – ಅಗ್ರ (ಶ್ರೇಷ್ಠ) + ಆಹಾರ (ಸ್ಥಳ) ಎಂಬೆರಡು ಪದಗಳ ಕೂಡು ಪದವಾಗಿದ್ದು, ಅದರರ್ಥ ಶ್ರೇಷ್ಠರಿಗೆ ಕೊಟ್ಟಿರುವ ಸ್ಥಳ ಎಂದಾಗುತ್ತದೆ. ಇಲ್ಲಿನ ಶ್ರೇಷ್ಠರೆಂದರೆ ಚಾತುರ್ವರ್ಣದಲ್ಲಿ ಅಗ್ರರಾದ ಬ್ರಾಹ್ಮಣರು. ಅವರಿಗೆ ದತ್ತಿಯಾಗಿ ಬಿಟ್ಟುಕೊಟ್ಟ ಊರುಗಳೇ ಅಗ್ರಹಾರಗಳು.[೧೫] ಬ್ರಾಹ್ಮಣ ಆದಿಪತ್ಯದ ಈ ಅಗ್ರಹಾರಗಳಲ್ಲಿ ಧಾರ್ಮಿಕ ಕಾರ್ಯಗಳೊಂದಿಗೆ

ವಿದ್ಯಾಭ್ಯಾಸವೂ ನಡೆಯುತ್ತಿತ್ತು. ಕೊಕಟೂರಿನ[೧೬] ಶಾಸನದಲ್ಲಿ ತ್ರೈಪುರುಷದೇವಾಲಯದ ಜೊತೆಗೆ ಶಾಲೆಯನ್ನು ಕಟ್ಟಿಸಿದ್ದು, ದೇವರ ಪೂಜೆ ಪುರಸ್ಕಾರಕ್ಕೆ ದತ್ತಿ ಕೊಡುವಾಗ ಶಾಲೆಯಲ್ಲೋದುವ ವಿದ್ಯಾರ್ಥಿಗಳ ಓದಿಸುವೋಜರ ಮತ್ತು ಮಾಣಿಯರ. ಊಟ ಉಡುಗೆಯ ಸಲುವಾಗಿ ದತ್ತಿಕೊಟ್ಟಿದ್ದನ್ನು ಹೇಳಲಾಗಿದೆ. ತೆಲಸಂಗದ ಶಾಸನದಲ್ಲಿ ಅಗ್ರಹಾರ ತೇಲಸಂಗದಲ್ಲಿ ಐದುನೂರು ಜನ ವಿದ್ಯಾವಿಶಾರದ ಬ್ರಾಹ್ಮಣರಿದ್ದರೆಂದು ಉಲ್ಲೇಖಿಸಲಾಗಿದೆ[೧೭] ಕೊಕಟನೂರ ಅಗ್ರಹಾರದಲ್ಲಿ ಭಾಯ್ಯಿದೇವನೆಂಬ ಶೈವಬ್ರಾಹ್ಮಣನು ಪ್ರಸಿದ್ಧನಾಗಿದ್ದು, ಆತನ ಶಿಷ್ಯರಲ್ಲಿ ಮಲ್ಲಿದೇವನು ಬಹಳ ಪ್ರಸಿದ್ಧನಾಗಿದ್ದನು. ಆತನು ಶಿವೈಕ್ಯನು, ವಿಪ್ರರಾಜ ಕುಲದೀಪಕನು ಎಂದು ಸಂಭೋದಿಸಲಾಗಿರುವುದರಿಂದ ಈತನು ಶವಾಗಮಾನುಯಾಯಿ ಬ್ರಾಹಣನಾಗಿದ್ದು, ಬಳಿಕ ಈತನು ಅಲ್ಲಿಯ ಭಾವಸುದ್ಧ ದೇವರಿಗೆ ದತ್ತಿ ಬಿಟ್ಟ ಸಂಗತಿ ಸ್ಪಷ್ಟವಾಗುತ್ತದೆ[೧೮] ಮುರಗುಂಡಿ ತಾಮ್ರ ಶಾಸನದಲ್ಲಿ[೧೯] ಮಹಾಗ್ರಹಾರ ಸತ್ತಿಯ ಎರಡುನೂರ ನಾನಾ ಗೋತ್ರದ ಬ್ರಾಹ್ಮಣರಿಗೆ ಮತ್ತು ನರಸಿಂಹದೇವರ ಅಂಗಭೋಗ, ರಂಗಭೋಗ ಮತ್ತು ಖಂಡಸ್ಫುಟಿತ ಜೀರ್ಣೋದ್ಧಾರಕ್ಕಾಗಿ ದತ್ತಿ ಬಿಟ್ಟ ವಿಷಯ ಉಲ್ಲೇಖಗೊಂಡಿದೆ.

**ಶ್ರಮಿಕ ವರ್ಗ:**

ಅಥಣಿ ನಾಡಿನಲ್ಲಿ ಬೇರೆ ಬೇರೆ ವೃತ್ತಿಗಳನ್ನು ಮಾಡುವ ಕುಶಲಕರ್ಮಿಗಳಾದ ಬಣಜಗ, ಬಡಿಗ, ನಾವದಿಗ, ಕುಂಬಾರ, ಕಲ್ಲುಕುಟಿಗ, ಗಾಣಿಗ ಮುಂತಾದ ಶ್ರಮಿಕ ವರ್ಗದವರನ್ನು ಶಾಸನಗಳು ಉಲ್ಲೇಖಿಸುತ್ತವೆ.

ಯಂಕ್ಕಂಚಿ ಶಾಸನವು[೨೦] ಬಡಗಿ ಚಂಪೋಜನಿಗೆ ಮನ್ನೆಯ ಎಂಟು ಹಟ್ಟು ಸ್ಥಾನಮಾನ ಸಹಿತವಾಗಿ ಆರುಕೆಯ್ಯ ದತ್ತಿ ಬಿಟ್ಟಿದ್ದನ್ನು ಪ್ರಸ್ತಾಪಿಸುತ್ತದೆ. ಕ್ಷೌರದ ಕೆಲಸ ಮಾಡುವವರು ನಾವಿದರು. ಉಮ್ರಾಣಿಶಾಸನದಲ್ಲಿ ಕಲ್ಲಿಸೆಟ್ಟಿ ಬ್ರಾಹ್ಮಣರಿಗೆ ದಾನವನ್ನು ಬಿಡುವಾಗ ನಾವಿದರ ಕೆಯ್ಯಿಯ ಪಕ್ಕದಲ್ಲಿ ಭೂಮಿಯನ್ನು ಕ್ರಯಗೊಂಡು ದತ್ತಿ ಬಿಟ್ಟ ವಿಷಯ ಪ್ರಸ್ತಾಪಿತಗೊಂಡಿದೆ.[೨೧] ವಜ್ರವಾಡ ಶಾಸನ[೨೨] ಶಿವಾಲಯ ಮಾಡಿದ ಜೀರನಾಣಿಯನ್ನು ಕುರಿತು ಹೇಳಿದೆ. ಈತ ಅಲ್ಲಿನ ಶಿಲ್ಪಿಯಾಗಿರಬೇಕು. ಕುಂಬಾರರ ಕುರಿತ ಉಲ್ಲೇಖ ಕೊಕಟನೂರ ಶಾಸನದಲ್ಲಿ ಬಂದಿದೆ.[೨೩] ಗಾಣದಿಂದ ಎಣ್ಣೆ ತೆಗೆಯುವವರನ್ನು ತೆಲ್ಲಿಗರೆಂದು ಕರೆಯಲಾಗಿದೆ. ಇವರು ಕಟ್ಟಿಕೊಂಡ ಸಂಘವೇ ತೆಲ್ಲಿಗರಯ್ವೊತ್ತಕ್ಕಲು ಈ ನಾಡಿನ ಬಳ್ಳಿಗೇರಿ ಶಾಸನವು ತೆಲ್ಲಿಗರ ಐವತ್ತೊಕ್ಕಲು ಕುರಿತು ಉಲ್ಲೇಖಿಸುತ್ತದೆ[೨೪] ಭೂವ್ಯವಸಾಯ ಮಾಡುವವರು ಒಕ್ಕಲಿಗರು. ಇವರು ತಮ್ಮ ಸೌಕರ್ಯ ಮತ್ತು ಸ್ವಹಿತ ರಕ್ಷಣೆಗಾಗಿ ಒಂದೊಂದೂರಿಗೆ ಪ್ರತ್ಯೇಕವಾದ ಸಂಘವನ್ನು ಕಟ್ಟಿಕೊಂಡಿದ್ದರು. ಇವುಗಳನ್ನು ಶಾಸನದಲ್ಲಿ ಅರವತ್ತೊಕ್ಕಲು ಎಂದು ಕರೆಯಲಾಗಿದ್ದು ಈ ನಾಡಿನ ತುಂಗಳ[೨೫] ಮತ್ತು ಅಗಡಿಯ[೨೬] ಶಾಸನದಲ್ಲಿ ಒಕ್ಕಲಿಗರ ಸಂಘಗಳ ಕುರಿತ ಉಲ್ಲೇಖಿಪಿವೆ. ಇದು ಆಯಾ

ಊರಿನಲ್ಲಿ ಒಕ್ಕಲುತನ ಮಾಡುವವರ ಸಂಖ್ಯೆಯನ್ನು ಸೂಚಿಸದೆ ಪಾರಂಪರಿಕವಾಗಿ ಬಂದ ಹೆಸರಾಗಿರುವಂತೆ ತೋರುತ್ತದ[೨೭] ಆದರೂ ಒಂದು ಶಾಸನದಲ್ಲಿ ಅರವತ್ತೊಕ್ಕಲು[೨೮] ಮತ್ತೊಂದು ಶಾಸನದಲ್ಲಿ ಐವತ್ತೊಕ್ಕಲು[೨೯] ಎಂದು ಕರೆದಿರುವುದು ಹೀಗೆ ಹೇಳಲು ಸಂದೇಹಕ್ಕೆಡೆಮಾಡಿಕೊಡುತ್ತದೆ. ದೇವರ ಪೂಜೆಗಾಗಿ ಮಾಲೆಯನ್ನು ಕಟ್ಟುವವರು ಮಾಲೆಗಾರರು, ಮಾಲೆಗಾರರ ಕುರಿತ ಉಲ್ಲೇಖ ಈ ನಾಡಿನ ಬಿಳೂರ[೩೦] ಶಾಸನದಲ್ಲಿ ಬಂದಿದೆ.

ದಾನದತ್ತಿ ಬಿಡುವಾಗ ಎಂಟುಹಿಟ್ಟು, ಮೂಲಿಗ ಪರಿಗ್ರಹ ಮುಂತಾದ ಪಾರಿಭಾಷಿಕ ಪದಗಳು ಬಳಕೆಯಾಗಿರುವುದು ವಿವಿಧ ಶಾಸನಗಳಿಂದ ಸ್ಪಷ್ಟವಾಗುತ್ತದೆ. ಎಂಟು ಹಿಟ್ಟು ಕೆಲವು ಶಾಸನಗಳಲ್ಲಿ ಹನ್ನಿಟ್ಟು, ಹಿಟ್ಟು, ಹಿಟ್ಟುದೆರೆ ಎಂದು ಬಳಕೆಯಾದರೆ ಮತ್ತೆ ಕೆಲವು ಶಾಸನಗಳಲ್ಲಿ ಹಿಟ್ಟುಕಾರ, ಹಿಟ್ಟಿನ ಎಂಬ ವಿಶೇಷ ರೂಪಗಳೂ ಬಳಸ್ಪಟ್ಟಿವೆ. ಹಿಟ್ಟು ಎಂಬ ಪದಕ್ಕೆ ಕಿಟ್ಟೆಲ್‌ರ ಕನ್ನಡ ಇಂಗ್ಲೀಷ್ ನಿಘಂಟುವಿನಲ್ಲಿ 'ಆಹಾರ'ಎಂದು ಅರ್ಥವಿದೆ. ಅಂದರೆ ವೃತ್ತಿಕಾರರಿಗೆ ಅವರ ಸೇವೆಯ ಪ್ರತಿಪಲವಾಗಿ ಆಹಾರಧಾನ್ಯ ಅಂದರೆ ಹಿಟ್ಟನ್ನು ಕೊಡುತ್ತರಬೇಕು. ಯಂಕ್ಕಂಚಿ ಶಾಸನದಲ್ಲಿ[೩೧] ಅರಮನೆಯಲ್ಲಿ ಕೆಲಸ ಮಾಡುವವನಿಗೆ ಶ್ರೀ ಕಲಿದೇವರ ಸನ್ನಿದಾನದಲ್ಲಿ ಹಿಟ್ಟು ಹಾಸಿ ಕೊಟ್ಟರು ಎಂಬ ಉಲ್ಲೇಖಬರುತ್ತದೆ. ಇದು ಪ್ರಾಚೀನ ಕಾಲದಿಂದಲೂ ರೂಢಿಯಲ್ಲಿರುವ ಇಂದಿನ ಆಯಗಾರ ಪದ್ಧತಿಯನ್ನು ಹೋಲುತ್ತದೆ. ದಾನ ಬಿಡುವ ಮತ್ತು ಪ್ರತಿಪಾಲಿಸುವ ಸಂದರ್ಭಗಳಲ್ಲಿ ಸ್ಥಾನಮಾನ್ಯರೋಂದಿಗೆ ಇದರ ಎಂಟು ಸದಸ್ಯರು ಹಾಜರು ಇಲ್ಲದ ಕಾಲದಲ್ಲಿಯೂ 'ಎಂಟು ಹಿಟ್ಟು' ಎಂದು ಶಾಸನಗಳು ಕರೆದಿರುವುದು ಅದರ ಸಾಂಘಿಕ ಸ್ವರೂಪವನ್ನು ಸೂಚಿಸುತ್ತದೆ.[೩೨] ಕಣಂಬಡೆ[೩೩] ನಾಡಿನ ಬಳ್ಳಿಗೇರಿ,[೩೪] ಯಂಕ್ಕಂಚಿ[೩೫] ಕೊಕಟನೂರು[೩೬] ಅಡಹಳ್ಳಿ[೩೭] ಗ್ರಾಮಗಳಲ್ಲಿ ಎಂಟು ಹಿಟ್ಟುಗಳಿದ್ದ ಉಲ್ಲೇಖ ಅಲ್ಲಿನ ಶಾಸನಗಳಿಂದ ಸ್ಪಷ್ಟವಾಗುತ್ತದೆ.ಎಂಟುಹಿಟ್ಟುಗಳೊಂದಿಗೆ ಬಳಕೆಯಾಗುವ ಮತ್ತೊಂದು ಪದ ಮೂಲಿಗ, ಮೂಲಿಗ ಎನ್ನುವುದು ವಂಶಪಾರಂಪರ್ಯದಿಂದ ಮುಂದುವರಿದುಕೊಂಡು ಬಂದ ಊರಿನ ಮೂಖ್ಯಸ್ಥಾನವನ್ನು ಸೂಚಿಸುತ್ತದೆ.[೩೮] ಮೂಲಿಗರ ಕುರಿತು ಉಲ್ಲೇಖ ಈ ನಾಡಿನ ಕೊಕಟನೂರ[೩೯] ತೆಲಸಂಗ[೪೦] ಉಮ್ರಾಣಿ[೪೧] ಕೊಟ್ಟಲಗಿ[೪೨] ಶಾಸನಗಳಲ್ಲಿ ಬರುತ್ತದೆ.

**ಕೌಟುಂಬಿಕ ವ್ಯವಸ್ಥೆ:**

ಕೌಟುಂಬಿಕ ವ್ಯವಸ್ಥೆಯಲ್ಲಿ ಪುರುಷ ಮತ್ತು ಮಹಿಳೆಯರು ಪ್ರಮುಖ ಸ್ಥಾನವನ್ನು ಹೊಂದಿರುತ್ತಾರೆ. ಹೆಣ್ಣು-ಗಂಡುಗಳ ಪರಸ್ಪರ ಹೊಂದಾಣಿಕೆಯ ಮನೋಭಾವದಿಂದ ಕೂಡಿದ ವ್ಯವಸ್ಥೆಯೇ ಕುಟುಂಬ. ಈ ವ್ಯವಸ್ಥೆಯಲ್ಲಿ ವಿವಾಹದ ಮೂಲಕ ಗಂಡು ಹೆಣ್ಣಿನ ಸಂಬಂಧಗಳು ಒಂದು ಒಪ್ಪಿತ ಪದ್ಧತಿಯಾಗಿದೆ. ಹೀಗಾಗಿ ಕುಟುಂಬವು ವಿವಾಹ-ರಕ್ತ

ಸಂಬಂಧ ಅಥವಾ ದತ್ತು ಸ್ವೀಕಾರದ ಸಂಬಂಧಗಳಿಂದ ಒಂದುಗೂಡಿದ ಮತ್ತು ನಿವಾಸವೊಂದರಲ್ಲಿ ವಾಸಿಸುತ್ತಾ ಗಂಡ ಹೆಂಡತಿ, ತಂದೆ-ತಾಯಿ, ಮಗ-ಮಗಳು, ಅಕ್ಕ-ತಂಗಿ ಇವೇ ಮುಂತಾದ ಸಾಮಾಜಿಕ ಸಂಬಂಧಗಳೊಂದಿಗೆ ಪರಸ್ಪರ ಒಡನಾಟ ಹಾಗೂ ಸಂವಹನ ನಡೆಸುತ್ತಾ ತಮ್ಮದೇ ಆದ ಸಾಮ್ರಾಜ್ಯ ಸಂಸ್ಕೃತಿಯನ್ನು ಸೃಷ್ಟಿಸುವ ವ್ಯಕ್ತಿಗಳ ಸಮೂಹವಾಗಿದೆ.[೪೩] ಹೀಗಾಗಿ ಕುಟುಂಬವನ್ನು ಸಮಾಜವೆಂದು ಕರೆಯಬಹುದಾಗಿದೆ.

**ವಿವಾಹ:**

ವಿವಾಹ ಒಂದು ಪ್ರಮೂಖವಾದ ಹಾಗೂ ಸಾರ್ವತ್ರಿಕ ಸ್ವರೂಪದ ಸಾಮಾಜಿಕ ಸಂಸ್ಥೆ. ಗಂಡು ಹೆಣ್ಣಿನ ಚಂದ್ರಬಲ, ತಾರಾಬಲಗಳ ರಾಶಿಕೂಟ ಗಣಗಳ ಸಂಬಂಧ ನೋಡಿ ಶುಭಲಗ್ನ ನಿರ್ಧರಿಸುತ್ತಿದ್ದುದ್ದನ್ನೂ ವಿಶೇಷವಾಗಿ ನಿರ್ಮಿಸಲಾದ ಚಪ್ಪರದಲ್ಲಿ ನಿಬ್ಬಣದ ಮಧ್ಯೆ ಶಾಸ್ತ್ರೋಕ್ತವಾಗಿ ವಿವಾಹ ನೇರವೇರುತ್ತಿದ್ದುದನ್ನೂ ವಚನಕಾರರ ವಚನಗಳ ಹಿನ್ನಲೆಯಲ್ಲಿ ಗಮನಿಸಿರುವ ಎಸ್.ಕೆ.ಕೊಪ್ಪಾರವರ ಹೇಳಿಕೆ ಇಲ್ಲಿ ಪ್ರಸ್ತುತವೆನಿಸುತ್ತದೆ. ಶಾಸನಗಳಲ್ಲಿ ವಿವಾಹದ ವರ್ಣನೆ ಮತ್ತು ಸಾಮಾನ್ಯ ಜನರ ಮದುವೆ ಕುರಿತ ವಿವರಣೆ ಕಂಡುಬರುವುದಿಲ್ಲ. ಆದರೆ ಅರಸು ಮನೆತನಗಳು ಅರಸು ಮನೆತನದೊಂದಿಗೆ ಸಂಬಂಧ ಬೆಳೆಸಿರುವುದು ಮತ್ತು ರಾಜಕೀಯ ಉದ್ಧೇಶಕ್ಕಾಗಿ ಸಾಮಂತ ಮಾಂಡಲಿಕ, ದಂಡನಾಯಕರುಗಳೊಂದಿಗೆ ವಿವಾಹ ಸಂಬಂಧ ಬೆಳೆಸಿರುವ ಸಂಗತಿಗಳನ್ನು ಶಾಸನಗಳು ಸ್ಪಷ್ಟಪಡಿಸುತ್ತವೆ. ಕಣಂಬಡೆ ನಾಡಿನ ವಳಸಂಗ ಶಾಸನ ಆರನೇ ವಿಕ್ರಮಾದಿತ್ಯನ ಹೆಂಡತಿ ಅಭಿನವ ಶಾರದೆ ಚಂದಲದೇವಿಯು ಬಿಜ್ಜಳನ ಮುತ್ತಬ್ಬೆಯೆಂದು ಹೇಳುತ್ತದೆ. ಕಲಚುರಿ ಜೋಗಮನ ಮಗಳಾದ ಸಾವಳದೇವಿಯನ್ನು ವಿಕ್ರಮಾದಿತ್ಯ ಮದುವೆಯಾದರೆ ವಿಕ್ರಮಾದಿತ್ಯನ ಮಗಳಾದ ಅಂದರೆ ಚಂದಲದೇವಿಯ ಮಗಳನ್ನು ಜೋಗಮನ ಮಗ ಪೆರ್ಮಾಡಿ ಮದುವೆಯಾಗಿದ್ದುದು ಈಗ ಸ್ಪಷ್ಟವಾಗಿದೆ. ಹೀಗಾಗಿ ಈ ಚಂದಲದೇವಿಯ ಮಗಳ ಮಗನೇ ಬಿಜ್ಜಳ[೪೪] ಎಂಬ ಅಂಶವನ್ನು ಗಮನಿಸಬಹುದಾಗಿದೆ. ಇದರಿಂದ ವಿವಾಹ ಸಂಬಂಧಗಳು ರಾಜ ಮತ್ತು ಮಂಡಳೇಶ್ವರರ ನಡುವೆ ನಡೆಯುತ್ತಿದ್ದುದಾಗಿ ತಿಳಿದುಬರುತ್ತದೆ.

**ಮಹಿಳೆ:**

ಪ್ರಾಚೀನ ಕಾಲದಿಂದಲೂ ಮಹಿಳೆ ಪೂಜ್ಯ ಸ್ಥಾನದಲ್ಲಿರುವುದು ಕಂಡುಬರುತ್ತದೆ. ಮಾತೃದೇವತೆಗಳ ಪೂಜೆ ನಡೆಯುತ್ತಿದ್ದ ಹಾಗೂ ಮಾತೃಪ್ರಧಾನ ಕುಟುಂಬ ವ್ಯವಸ್ಥೆ ಜಾರಿಯಲ್ಲಿದ್ದ ಸಿಂಧೂ ನದಿ ತೀರದ ಸಂಸ್ಕೃತಿಯಲ್ಲಿಯೂ ವೇದಗಳ ಕಾಲದಲ್ಲಿಯ ಮಹಿಳೆಯರ ಸ್ಥಾನಮಾನಗಳು ಊರ್ಜಿತವಾಗಿಯೇ ಇದ್ದವು. ಋುಗ್ವೇದದ ಮಂತ್ರ ದೃಷ್ಟಾರರಲ್ಲಿ ಪುರುಷರಂತೆ ಮಹಿಳೆಯರೂ ಇದ್ದರು. ಸಾಮವೇದದಲ್ಲಿ ಇಂಥ ಹಲವಾರು ಮಹಿಳೆಯರು ಕಂಡುಬರುತ್ತಾರೆ. ಈ ಕಾಲದಲ್ಲಿ ಉಚ್ಚವರ್ಗಗಳ ಮಹಿಳೆರಿಗೆ ಉಪನಯನ

ಕೂಡ ಮಾಡಲಾಗುತ್ತಿತ್ತು. ವಿದುಷಿಯರಾದ ಮಹಿಳೆಯರು ಅಧ್ಯಾಪನ ವೃತ್ತಿ ಅವಲಂಬಿಸಿದವರಾಗಿದ್ದರು. ಆದರೂ ವೇದಗಳ ಕಾಲದಲ್ಲಿ ನಿಧಾನವಾಗಿ ಗಂಡಿಗೆ ಪ್ರಾಶಸ್ತ್ಯ ದೊರೆಯತೊಡಗಿತ್ತು. ಪಿತೃಪ್ರಧಾನ ಕುಟುಂಬ ಜಾರಿಯಲ್ಲಿ ಬಂದಿತು. ಅಥರ್ವಣ ವೇದದಲ್ಲಿ ಪುತ್ರ ಸಂತಾನಕ್ಕಾಗಿ ಮಾಡುತ್ತಿದ್ದ ವಿಧಿಗಳು ಹೇಳಲ್ಪಟ್ಟಿವೆ. ಬ್ರಹದಾರಣ್ಯಕ ಉಪನಿಷತ್ತಿನಲ್ಲಿ ಮಾತ್ರ ಪಾಂಡಿತ್ಯ ಪೂರ್ಣ ಮಗಳ ಜನನಕ್ಕಾಗಿ ಪ್ರಾರ್ಥಿಸುವ ವೃತಾಚರಣೆ ಹೇಳಲಾಗಿದೆ.[೪೫] ದಾನ ಮಾಡುವಾಗ ಪುರುಷ ತಾನೊಬ್ಬನೇ ದಾನ ಮಾಡದೆ ಮಡದಿಯ ಸಮ್ಮತಿಯೊಂದಿಗೆ ಇಲ್ಲವೆ ಅವಳೊಡಗೂಡಿ ದಾನ ಕೈಕೊಳ್ಳುವಂತೆ ಧರ್ಮಶಾಸ್ತ್ರಗಳು ತಿಳಿಸುತ್ತವೆ. ಈ ನಾಡಿನ ಕೊಕಟನೂರು ಶಾಸನವು ತ್ರೈಲೋಕ್ಯಮಲ್ಲದೇವನ ಮಹಾಮಂಡಳೇಶ್ವರ ಜೋಗಪಯ್ಯರಸನು ತನ್ನ ಅರಸಿಯಾದ ಪೊಲ್ಲಿಕಬ್ಬೆಯೊಂದಿಗೆ ಕೂಚಸೆಟ್ಟಿ ಮಾಡಿಸಿದ ಕೊಕಟನೂರಿನ ತ್ರೈಪುರುಷದೇವರಿಗೆ ಜನ್ನವಾಡ ಗ್ರಾಮವನ್ನು ದತ್ತಿಯಾಗಿ ಬಿಟ್ಟಿದ್ದನ್ನು ಉಲ್ಲೇಖಿಸುವಾಗ ಅರಸಿ ಪೊಲ್ಲಿಕಬ್ಬೆಯನ್ನು

ಜನಕಜೆ ಪಾಟಿ ಹೇಮವತಿ – ರೋಹಿಣಿ ತತ್ಸರೂಪೆವಾ
ಗ್ವನಿತಿ ಸಮಂ ತಿಳೋತ್ತಮೆ ಸಮಾನಮರುನ್ಧತಿ ಮಿಕ್ಕ ಪೋಲ್ವಿಗೊ
ಮಿನಿ ದೊರೆ ಸತ್ಯಭಾಮ ಸರಿ ರೇಣುಕಿ ಮನ್ಮಥ ಪ್ರಿಯಾಂ
ಗನೆ ದೊರೆಯೆಂಬುದೆಂಬುದು ಪೆಬಿರ್ದ್ದೊರೆಯೆಂಬುದೆ ಪೊಲ್ಲಕಬ್ಬೆಯೊಳ್ [೪೬]

ಎಂದು ವರ್ಣಿಸಿದ್ದನ್ನು ಗಮನಿಸಿದರೆ ಮಹಿಳೆಯನ್ನು ದೇವತೆಗಳ ಸಮಾನ ಎಂದು ಪರಿಗಣಿಸುತ್ತಿದ್ದ ವಿಷಯ ಸ್ಪಷ್ಟವಾಗುತ್ತದೆ.

ಮಹಿಳೆಯು ದಾನದತ್ತಿಕಾರ್ಯ ಮತ್ತು ದೇವಾಲಯ ನಿರ್ಮಾಣ ಮಾಡಿದ್ದನ್ನು ಉಮ್ರಾಣಿ ಶಾಸನವು ಉಲ್ಲೇಖಿಸುತ್ತದೆ.[೪೭] ಅದು ಆರನೆಯ ವಿಕ್ರಮಾದಿತ್ಯನ ಮಹಾಮಂಡಳೇಶ್ವರ ಹೆಮ್ಮಾಡಿಯರಸನ ಪಟ್ಟಮಹಿಷಿ ಚಂದಲದೇವಿ ಮತ್ತು ಕುಮಾರ ಜಯಸಿಂಹದೇವರು ತಾವು ಮಾಡಿಸಿದ ಹೆಮ್ಮೇಶ್ವರ ದೇವಾಲಯಕ್ಕೆ ಜನ್ನವಾಡ ಗ್ರಾಮದತ್ತಿ ಬಿಟ್ಟಿದ್ದನ್ನು ಹೇಳುತ್ತದೆ. ಉಮ್ರಾಣಿಯ[೪೮] ಮತ್ತೊಂದು ಶಾಸನದಲ್ಲಿ ಸ್ತ್ರೀಯರ ಹೆಸರಿನಲ್ಲಿ ಅಂದರೆ ಹೆಮ್ಮಾಡಿಯರಸನ ಪಟ್ಟಮಹಿಷಿ ಚಂದಲದೇವಿಯ ಹೆಸರಿನಲ್ಲಿ ಚಂದಲೇಶ್ವರ ದೇವಾಲಯ ಕಟ್ಟಿಸಿ ಅದಕ್ಕೆ ದತ್ತಿ ಬಿಟ್ಟಿದ್ದನ್ನು ಸ್ಪಷ್ಟಪಡಿಸುತ್ತದೆ. ತೆಲಸಂಗ[೪೯] ಶಾಸನವು ಸೆಟ್ಟಿಬೊಮ್ಮನ ಸತಿ ಅಕ್ಕಣಬ್ಬೆಯನ್ನು ಸತಿಪತಿಭಕ್ತೆ, ಸದ್ಧರ್ಮ್ಮ ಮೂರ್ತಿ ಗುಣಯುತೆ, ಸೀತೆಗೆ ಪಡಿ, ರೂಡಿಯ ಗಿರಿಜಾತೆಗೆ ದೊರೆ ಯಕ್ಕಣಬ್ಬೆ ಎಂದು ಉಲ್ಲೇಖಿಸಿದೆ. ಹೀಗೆ ಮಹಿಳೆಯರು ದಾನದತ್ತಿಕಾರ್ಯ ಮತ್ತು ದೇವಾಲಯ ನಿರ್ಮಾಣದಂತಹ ಕಾರ್ಯದಲ್ಲಿ ತೊಡಗಿಸಿಕೊಂಡು ಸಮಾಜದಲ್ಲಿ ಗೌರವಯುತ ಸ್ಥಾನ ಹೊಂದಿದ್ದರು.

**ಬಹುಪತ್ನಿತ್ವ:**

ಪ್ರಾಚೀನ ಕಾಲದಲ್ಲಿ ಸಮಾಜವು ಬಹುಪತ್ನಿತ್ವವನ್ನು ಮಾನ್ಯ ಮಾಡುತ್ತಿತ್ತು. ಆದರೆ ಜನಸಾಮಾನ್ಯರನ್ನು ಹೊರೆತು ಪಡಿಸಿ ರಾಜ ಮಹಾರಾಜರು ಮಂಡಳೇಶ್ವರರು, ಸಾವಂತರು ಮಾತ್ರ ಬಹುವಲ್ಲಭರಾಗಿದ್ದರು. ಆರನೆಯ ವಿಕ್ರಮಾದಿತ್ಯನಿಗೆ ೧೬ಜನ ರಾಣಿಯರು[೫೦] ಇದ್ದುದಾಗಿ ತಿಳಿಯುತ್ತದೆ. ಸಾಮಾನ್ಯವಾಗಿ ಹಿರಿಯ ಅರಸಿಯನ್ನು ಪುಟ್ಟ ಮಹಿಸಿ, ಪಿರಿಯರಸಿ, ಅಗ್ರಮಹಿಷಿ ಎಂದು ಕರೆದುದು ಕಂಡು ಬರುತ್ತದೆ. ವಳಸಂಗ ಶಾಸನ ವಿಕ್ರಮಾದಿತ್ಯನ ಪುಟ್ಟಮಹಿಸಿ ಚಂದಲದೇವಿಯು ವಳಸಂಗದ[೫೧] ಆಡಳಿತಾಧಿಕಾರಿಯಾಗಿದ್ದ ಸಂಗತಿಯನ್ನು ತಿಳಿಸುತ್ತದೆ.

**ಆಹಾರ ಪಾನೀಯಗಳು:**

ನಮ್ಮ ಪೂರ್ವಜರು ವಿವಿಧ ಕಲೆಗಳಲ್ಲಿ ಪರಿಣತಿ ಹೊಂದಿದಂತೆ ಪಾಕಶಾಸ್ತ್ರದಲ್ಲಿಯೂ ಹೊಂದಿದ್ದರು. ನಳ, ಭೀಮಸೇನರು ಪಾಕವಿದ್ಯಾ ಪ್ರವೀಣರಾಗಿದ್ದು, ಅವರ ಹೆಸರುಗಳಲ್ಲಿ ಪಾಕಶಾಸ್ತ್ರಗಳೇ ರಚಿತವಾಗಿವೆ. ಕನ್ನಡದಲ್ಲಿ ಎರಡನೇಯ ಸೋಮೇಶ್ವರನ ಮಾನಸೊಲ್ಲಾಸ, ಎರಡನೆಯ ಚಾವುಂಡರಾಯನ ಲೋಕೋಪಕಾರಗಳಲ್ಲಿ ಪಾಕಶಾಸ್ತ್ರಕ್ಕೆ ಸಂಬಂಧಿಸಿದ ಭಾಗಗಳಿವೆ. ಕನ್ನಡ ನಾಡಿನ ಮೀಸಲಡಿಗೆಗಳಾದ ಮಂಡಕ (ಮಂಡಿಗೆ) ದೊಸಕ (ದೋಸೆ) ಇದ್ದಲಕ (ಇಡ್ಡಲಿಗೆ) ಸೇವಿಕಾ (ಸೇವಗೆ) ಮಜ್ಜಿಕಾ (ಮಜ್ಜಿಗೆ)ಗಳನ್ನು, ಹುಳಿಗಾಗಿ ಬಳಸುವ ಹುಣಸೆ, ಕವಳಿ, ಅಂಬಟೆಕಾಯಿ, ಲಿಂಬೆ, ಮಂಗರವಳ್ಳಿಗಳನ್ನು, ಖಾರಕ್ಕಾಗಿ ಬಳಸುವ ಶುಂಠಿ, ಮೆಣಸು, ಕಾರ ಗೆಣಸುಗಳನ್ನು ಎರಡನೆಯ ಸೋಮೇಶ್ವರ ತನ್ನ ಮಾನಸೊಲ್ಲಾದಲ್ಲಿ ಹೆಸರಿಸಿದ್ದಾನೆ.[೫೨]

ಅಥಣಿ ನಾಡಿನ ಶಾಸನಗಳಲ್ಲಿ ಆಹಾರ ಪಾನೀಯ ಕುರಿತು ನೇರವಾದ ಉಲ್ಲೇಖಗಳಿಲ್ಲದಿದ್ದರೂ ದಾನ ಬಿಡುವ ಮತ್ತು ವ್ಯಾಪಾರದ ಸಂದರ್ಭಗಳಲ್ಲಿ ದವಸ-ಧಾನ್ಯಗಳ ಕಾಯಿಬಾಡುಗಳ ಪ್ರಸ್ತಾಪ ವಿವಿಧಡೆಗೆ ಬಂದಿದೆ. ದೇವರ ಉತ್ಸವ, ಹಬ್ಬದ ದಿನಗಳಲ್ಲಿ ವಿಶೇಷ ಅಡುಗೆಯ ವ್ಯವಸ್ಥೆ ನಡೆಯುತ್ತಿದ್ದಂತೆ ಕಂಡು ಬರುತ್ತದೆ. ಕೊಕಟನೂರ ಶಾಸನದಲ್ಲಿ[೫೩] ಕೊಕಟನೂರ ಹಾಲು ಮಂಡಿಗೆಗೆ ಮ.೧೮ ಪಾಯಸಗೆಯಿ ಮ.೪ ದತ್ತಿ ಬಿಟ್ಟಿದ್ದನ್ನು ನಿರೂಪಿಸಿದೆ.

ಭಾರತೀಯರ ಜೀವನದಲ್ಲಿ ವೀಳ್ಯ ಬಹಳ ಪ್ರಾಚೀನ ಕಾಲದಿಂದಲೂ ಹಾಸುಹೊಕ್ಕಾಗಿದೆ. ದೇವಾಲಯಕ್ಕೆ ಬಿಡುವ ದಾನಗಳಲ್ಲಿ ದೇವರಿಗೆ ನಡೆಸುವ ಸೇವೆಗಳಲ್ಲಿ ವೀಳೆ, ಅಡಕೆಯೂ ಒಂದು. ವಿಳೆಯದ ಮಾನ್ಯದ ಅಂಗಡಿಗುಡಿ ನಿವೇಶನ ೬ ಬಿಟ್ಟುದನ್ನು ಕೊಕಟನೂರ ಶಾಸನ ತಿಳಿಸುತ್ತದೆ. ಕಣಂಬಡೆ ನಾಡಿನ ತುಂಗಳ ಶಾಸನದಲ್ಲಿ "ಗೌಡರು ತಮ್ಮ ತೋಟದಲೆರಡು ಗಿಡ, ಹೂವು, ಕಾಯ, ಬದನೆಕಾಯಿ, ಹೀರೆಕಾಯಿ, ಹಾಗಲಕಾಯಿ,

ಸೌತೆಕಾಯೆರಡು ಅಲ್ಲಿಯ ದೇವರ ಚೈತ್ರಕಂ ಹಾಗೂ ಪವಿತ್ರಕ್ಕೆ ಹಾಗವಂ ವರುಷಂಪ್ರತಿ ದತ್ತಿ ಬಿಟ್ಟರು ಎಂದು ಬಾಡುಕಾಯಿಗಳನ್ನು ಹೆಸರಿಸಿದೆ."[೫೪]

**ಸಾರ್ವಜನಿಕ ಚಟುವಟಿಕೆಗಳು :**

ಮನುಷ್ಯನ ಎಲ್ಲ ಚಟುವಟಿಕೆಗಳಿಗೆ ಧರ್ಮವು ಪ್ರೇರಣೆಯನ್ನು ನೀಡುತ್ತದೆ. ಹೀಗಾಗಿ ಆತ ತನ್ನ ಲೌಕಿಕ ಕಾರ್ಯದ ಜೊತೆಗೆ ಧಾರ್ಮಿಕ ಕಾರ್ಯಗಳನ್ನು ಮಾಡುತ್ತಿದ್ದ ಸಂಗತಿ ವಿವಿಧ ಶಾಸನಗಳಿಂದ ಉಕ್ತವಾಗುತ್ತದೆ. ಧಾರ್ಮಿಕ ಕಾರ್ಯಮಾಡಿ ಪುಣ್ಯ ಸಂಪಾದಿಸುವುದು ಮಾನವನ ಗುರಿ. ಹೀಗಾಗಿ ಅನೇಕ ದೇವಾಲಯ, ಬಾವಿ, ಕೆರೆ, ಕಟ್ಟೆ, ಆರಾಮಗಳು ನಿರ್ಮಾಣಗೊಂಡುದಲ್ಲದೆ ಅವುಗಳ ಸುವ್ಯವಸ್ಥೆಯ ಕಾರ್ಯವು ಮುಂದುವರಿಯಿತು. ಹೀಗಾಗಿ ಕನ್ನಡಿಗರ ಔದಾರ್ಯ ಮುಖ್ಯವಾಗಿ ಪ್ರಕಟವಾಗಿರುವುದು ಒಂದು ದೇವಸ್ಥಾನ ನಿರ್ಮಾಣದಲ್ಲಿ. ಮತ್ತೊಂದು ತಟಾಕ ನಿರ್ಮಾಣದಲ್ಲಿ ಎಂಬ ಮಾತು ಸುಳ್ಳಲ್ಲ.[೫೫]

ವ್ಯಕ್ತಿಯು ತನ್ನ ಹೆಸರಿನಲ್ಲಿ ಕೆರೆಯನ್ನು ಕಟ್ಟಿಸಿ ಅದರ ಜೀರ್ಣೋದ್ಧಾರಕ್ಕಾಗಿ ದತ್ತಿ ಬಿಟ್ಟಿದ್ದನ್ನು ಅಥಣಿ ತಾಲೂಕಿನ ತೆಲಸಂಗದ ಶಾಸನವು ಕಂಕಣವು ಕೇತನು ಕಲ್ಲಕೆರೆಯನ್ನು ಕಟ್ಟಿಸಿ, ಅದರ ಖಂಡಸ್ಫುಟಿತಜೀರ್ಣೋದ್ಧಾರಕ್ಕಾಗಿ ದತ್ತಿ ಬಿಟ್ಟಿದ್ದನ್ನು ಪ್ರಸ್ತಾಪಿಸುತ್ತದೆ. ಕೆರೆಯ ಸಂರಕ್ಷಣೆಗಾಗಿ ತೆಲಸಂಗದ ಮಹಾಜನರುಗಳು ಇದೆ ಕೆರೆಗೆ ದತ್ತಿ ಬಿಟ್ಟ ಸಂಗತಿಯೂ ಅಲ್ಲಿದೆ.[೫೬] ತೆಲಸಂಗ ಬಳ್ಳಿಗೇರಿ[೫೭] ಶಾಸನದಲ್ಲಿಯ ವಿಶಾಲವಾದ ಬಳ್ಳಿಗೇರಿಯ ಕೆರೆಯನ್ನು ವರ್ಣಿಸಿ ಅದಕ್ಕೆ ದಾನ ಬಿಟ್ಟಿದ್ದನ್ನು ವಿವರಿಸಿದೆ. ಉಮ್ರಾಣಿ[೫೮] ಶಾಸನದಲ್ಲಿ ಚಕ್ರವರ್ತಿ ಬಿಜ್ಜಳನ ಮಹಾಮಂಡಳೇಶ್ವರ ಪಾವಿನ ಪೆರ್ಮಾಡಿಯು ಉಂಬರವಾಣಿಯನ್ನು ಆಳುತ್ತಿದ್ದಾಗ ಶ್ರೇಷ್ಠ ಕಲ್ಲಿಸೆಟ್ಟಿ ತನ್ನ ಧನವನ್ನು ಬಾವಿ, ಅರವಟ್ಟಿಗೆ, ಉದ್ಯಾನ ಇವುಗಳಲ್ಲಿ ವಿನಯೋಗಿಸಿ ಧನ್ಯನಾಗಿದ್ದನು ಎಂದು ಹೇಳಿದೆ.

ಪ್ರಯಾಣಿಕರ ಅನುಕೂಲಕ್ಕಾಗಿ ಮಾರ್ಗಮಧ್ಯೆ ಅರವಟ್ಟಿಗೆಗಳಿರುತ್ತಿದ್ದವು. ಪ್ರವಾಸಿಗರಿಗೆ ಅರವಟ್ಟಿಗೆಗಳಲ್ಲಿ ನೀರು ಸಿಕ್ಕರೆ ಸತ್ರಗಳಲ್ಲಿ ಆಹಾರವು ಮತ್ತು ವಿಶ್ರಾಂತಿ ತೆಗೆದುಕೊಳ್ಳಲು ವಸತಿಯು ದೊರೆಯುತ್ತಿತ್ತು. ಇದು ಒಂದು ರೀತಿಯಲ್ಲಿ ಅತಿಥಿ ಸತ್ಕಾರದ ವಿಸ್ತೃತ ರೂಪವೆನ್ನಬಹುದು. ಸತ್ರಗಳು ಬಹುಮಟ್ಟಿಗೆ ದೇವಾಲಯಗಳ ಅಥವಾ ಮಠಗಳಿಗೆ ಹೊಂದಿಕೊಂಡಿರುತ್ತಿದ್ದವು. ಪ್ರಾಚೀನ ಕರ್ನಾಟಕದ ಜನ ಭೂಧಾನ ವಿದ್ಯಾದಾನಗಳಿಗಿಂತ ಅನ್ನದಾನವೇ ಶ್ರೇಷ್ಠವೆಂದು ನಂಬಿದ್ದರಿಂದ ಅನೇಕ ಸತ್ರಗಳಿಗೆ ದಾನದತ್ತಿಗಳನ್ನು ಬಿಟ್ಟುಕೊಡಲಾಗುತ್ತಿತ್ತು.[೫೯] ಕಲ್ಲಿಸೆಟ್ಟಿಯು ಚಕ್ರವರ್ತಿ ಬಿಜ್ಜಳನ ಮಹಾಮಂಡಳೇಶ್ವರ ಪಾವಿನಪೆರ್ಮ್ಮಾಡಿ ಇವರ ಸನ್ನಿಧಾನದಲ್ಲಿ ಐದು ಜನ ಪ್ರವಾಸಿ ಬ್ರಾಹ್ಮಣರ ಅನ್ನಛತ್ರಕ್ಕೆ ಎರಡು ಮತ್ತರು ಭೂಮಿಯನ್ನು ಕ್ರಯಗೊಂಡು ದಾನ ಮಾಡಿದ ಸಂಗತಿಯನ್ನು ಉಮ್ರಾಣಿ ಶಾಸನವುಹೇಳುತ್ತದೆ. ಅಲ್ಲದೆ ಎದೆ ಶಾಸನದಲ್ಲಿ ಬಿಜ್ಜಳನ ಮಗನಾದ

ರಾಯಮುರಾರಿ ಸೋಯಿದೇವನ ಆಳ್ವಿಕೆ ಸೂಚಿಸಿ ಮನ್ನೆಯ ಸಾಪಿನ ಪೆರ್ಮ್ಮಾಡಿಯ ಸಮಕ್ಷಮದಲ್ಲಿ ಮೂರು ಮತ್ತರು ಭೂಮಿಯನ್ನು ಕ್ರಯಗೊಂಡು ಸತ್ರಕ್ಕೆ ದಾನ ಬಿಟ್ಟಿದ್ದನ್ನು ಹೇಳಿದೆ. ಅಷ್ಟೇ ಅಲ್ಲ ಇದೆ ಸತ್ರಕ್ಕೆ ಒಂಭತ್ತು ಕಯ್ಯ ಚದುರಸ ನಿವೇಶನವನ್ನು ಕ್ರಯಕ್ಕೆ ತೆಗೆದುಕೊಂಡು ಒಂದು ಭೋಜನ ಶಾಲೆಯನ್ನು ಕಟ್ಟಿಸಿಕೊಟ್ಟನೆಂದು ಹಾಗೂ ಸತ್ರಕ್ಕೆ ಮತ್ತೆ ಎರಡು ಮತ್ತರು ಭೂಮಿಯನ್ನು ಕೊಂಡುಕೊಟ್ಟನೆಂದು ಹೇಳಲಾಗಿದೆ.[೬೦] ತೆಲಸಂಗದ[೬೧] ಶಾಸನವು ಅಗ್ರಹಾರದ ಮಹಾಜನಂಗಳು ಮೂವತ್ತಾರು ಬೀಡಿನ ಸೆಟ್ಟಿಯರು, ತಳದ ಬಣಜಿಗ ಸೆಟ್ಟಿಯರು, ಅಲ್ಲಿನ ಸತ್ರಕ್ಕೆ ಸಂತೆಯ ಸುಂಕವನ್ನು ಬಿಟ್ಟಿದ್ದನ್ನು ಮತ್ತು ಸತ್ರದಲ್ಲಿ ಅಡಿಗೆ ಕೆಲಸ ಮಾಡುವ ಬ್ರಾಹ್ಮಣಿತಿಯ ಉಡುವ ಸೀರೆ ಹಾಗವೊಂದನ್ನು ಬಿಟ್ಟುದಾಗಿ ಹೇಳಿದೆ.ಸಾರ್ವಜನಿಕರು ತಮ್ಮ ದಿನನಿತ್ಯದ ವ್ಯವಹಾರಗಳಿಗಾಗಿ ಅಂಗಡಿ ಮೂಗ್ಗಟ್ಟುಗಳನ್ನು, ಸಂತೆಯನ್ನು ನೆರೆಯಿಸುವುದು ಶಾಸನಗಳಲ್ಲಿ ಕಂಡು ಬರುತ್ತದೆ. ಅಥಣಿ ತಾಲೂಕಿನ ತೆಲಸಂಗ[೬೨] ಶಾಸನದಲ್ಲಿ ವಿವಿಧ ವ್ಯಾಪಾರಿಗಳ ಅಂಗಡಿಗಳನ್ನು ಹೆಸರಿಸಿ ಪ್ರತಿಯೊಬ್ಬ ವ್ಯಾಪಾರಿತಿಂದ ಸುಂಕ ಪಡೆಯುತ್ತಿದ್ದ ಸಂಗತಿ ಹೇಳಿರುವುದುರಿಂದ ಇವು ಒಂದೆ ಕಡೆ ಇದ್ದು ಅಲ್ಲಿ ಸಂತೆ ನೆರೆಯುತ್ತಿತ್ತು ಎಂಬ ಅಂಶ ಗಮನಕ್ಕೆ ಬರುತ್ತದೆ.

**ವಿದ್ಯಾಭ್ಯಾಸ:**

ವಿದ್ಯೆಯ ವಿಷಯದಲ್ಲಿ ಪ್ರಾಚೀನ ಭಾರತವು ಇಟ್ಟುಕೊಂಡಿದ್ದ ಅಭಿಪ್ರಾಯಗಳನ್ನು ಹೀಗೆ ಸಂಗ್ರಹಿಸಬಹುದು. ವಿದ್ಯೆಗಿಂತ ಶ್ರೇಷ್ಠವಾದುದು ಮತ್ತೊಂದು ಇಲ್ಲ. ಸರ್ವದ್ರವ್ಯಗಳಲ್ಲಿ ವಿದ್ಯೆಯೆ ನಿಜವಾದ ಧನ. ಏಕೆಂದರೆ ಅದನ್ನು ಯಾರೂ ಅಪಹರಿಸಲಾರರು. ಅದು ಅಸರ್ಘ್ಯವಾದುದು ಮತ್ತು ಅಕ್ಷಯವಾದುದು.[೬೩] ಜ್ಞಾನಾರ್ಜನೆಯು ಒಂದು ನಾಡಿನ ಸಂಸ್ಕೃತಿಯ ಕುರುಹಾಗಿದ್ದು ಎಲ್ಲ ಕಾಲ, ದೇಶಗಳಲ್ಲಿ ಅದಕ್ಕೆ ಗೌರವ ವ್ಯಕ್ತವಾಗುತ್ತ ಬಂದಿದೆ. ಬಹು ಹಿಂದಿನಿಂದಲೂ ಭಾರತೀಯರು ವಿದ್ಯೆಯ ಬಗ್ಗೆ ಅಪಾರ ಗೌರವವನ್ನಿಟ್ಟುಕೊಂಡು ಬಂದಿದ್ದರೆ. ಪ್ರಾಚೀನ ಭಾರತೀಯರ ಬದುಕನ್ನು ನಿಯಂತ್ರಿಸುವ ಧರ್ಮ ವಿದ್ಯಾಭ್ಯಾಸ ಪದ್ಧತಿಯನ್ನು ಬಿಟ್ಟಿಲ್ಲ. ವಿದ್ಯೆಯ ಪರಮಪ್ರಯೋಜನ ಆತ್ಮಸಿದ್ಧಿ, ಆತ್ಮಜ್ಞಾನ ಎನ್ನುವಲ್ಲಿ ಅದರ ನೇರ ಸೂಚನೆಯಿದೆ. ಜನರು ದೇವಾಲಯಗಳಿಗೆ ದಾನ – ದತ್ತಿಗಳನ್ನು ಬಿಟ್ಟುಕೊಡುವಾಗ ವಿದ್ಯಾಭ್ಯಾಸಕ್ಕಾಗಿ ಇಂತಿಷ್ಟು ಎಂದು ನಿಗದಿಪಡಿಸುತ್ತಿದ್ದರು. ಹೀಗೆ ದೇವಸ್ಥಾನಗಳು ವಿದ್ಯಾಭ್ಯಾಸ ಕೇಂದ್ರಗಳೆನಿಸಿದವು.[೬೪] ವಿದ್ಯಾ ಕೇಂದ್ರಗಳಾದ ದೇವಸ್ಥಾನಗಳಲ್ಲಿ ತಪೋಧನರು, ಛಾತ್ರರು ವಿದ್ಯಾಬ್ಯಾಸದಲ್ಲಿ ನಿರತರಾಗಿರುತ್ತಿದ್ದರು. ತಪೊಧನರು ನೈಷ್ಠಿಕ ಬ್ರಹ್ಮಚಾರಿಗಳಾಗಿದ್ದು ವಿದ್ಯಾಭ್ಯಾಸದ ನಂತರ ಮಠ, ದೇವಸ್ಥಾನಗಳಲ್ಲಿ ಸ್ಥಾನಪತಿಗಳಾಗುತ್ತಿದ್ದರು. ಛಾತ್ರರು ವಿದ್ಯಾಭ್ಯಾಸ ಮುಗಿದ ಮೇಲೆ ಗೃಹಸ್ಥಾಶ್ರಮಕ್ಕೆ ಪಾದಾರ್ಪಣ ಮಾಡುತ್ತಿದ್ದರೆ, ತಪೋಧರರು "ಯಮನಿಯಮಾಸನ, ಪ್ರಾಣಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಜಪ ಸಮಾಧಿ ಸಂಪನ್ನರಾಗಲು" ಸಾಧನೆ ನಡೆಸುವುದರೊಂದಿಗೆ ದಿನಾಲು ಹಿರಿಯ ಪಂಡಿತರಾದ

ಸ್ಥಾನಾಪತಿಗಳೊಂದ ಉಪದೇಶ ಪಡೆಯುತ್ತಿದ್ದರೆಂದು ತೋರುತ್ತದೆ. "ಕೊಕಟನೂರು ಶಾಸನದಲ್ಲಿ ಚಾಳುಕ್ಯ ಚಕ್ರವರ್ತಿ ತ್ರೈಲೋಕ್ಯಮಲ್ಲದೇವನ ಮಹಾಮಂಡಳೇಶ್ವರ ಜೋಗಭೂಪಾಲಕನು ಕರಹಡನಾಲ್ಸಾಸಿರ ಪ್ರದೇಶವನ್ನು ಆಳುತ್ತಿದ್ದಾಗ ಕೊಕಟನೂರಿನಲ್ಲಿ ಕೂಚಸೆಟ್ಟಿ ಕಟ್ಟಿಸಿದ ತ್ರೈಪುರುಷ ದೇವರಿಗೆ ದತ್ತಿಯನ್ನು ಬೀಡುವಾಗ ಅಲ್ಲಿಯ ಶಾಲೆಯ ವಿದ್ಯಾರ್ಥಿಗಳಗೆ ಓದಿಸುವ ಉಪಾಧ್ಯಾಯರಿಗೆ ಅಲ್ಲಿಯ ಮಾಣಿಯರ್ಗ್ಗಶನಾಚ್ಛಾದನಕ್ಕೆ ಮತ್ತಂಗಳ ೧೨ರ ಬಳಿಯ ಜನ್ನವಾಡನನ್ನು ದತ್ತಿಯಾಗಿ ಬಿಟ್ಟಿರುವುದನ್ನು ತಿಳಿಸುತ್ತದೆ" ಮತ್ತು ಇದೆ ಶಾಸನದಲ್ಲಿ ವಿದ್ಯೆಯನ್ನು ಕಲಿಸುತ್ತಿದ್ದ ಶಾಲೆಯನ್ನು

"ಶಾಲೆಯ ಪರಿಸೂತ್ರದೊಳಾ
ತ್ಮಾಲಯಮಂ ಮಾಡಿಕೊಳ್ವುದಲ್ಲದೆ ಪೆರತೊ ।
ನ್ದಾಲಯದೊಳಿರ್ಪ್ಪವಂ ಪ್ರತಿ
ಕೂಲಂ ಲೋಲ ನಿಮಿಷ್ಟನಲ್ಲಂ ದುಷ್ಟಂ ॥"

ಎಂದು ವರ್ಣಿಸಿ ಅಲ್ಲಿಯ ಎಂಟು ಜನ ನಿಮಿಷ್ಟರಿಗೆ ಉಂಬಳಿಯಾಗಿ ತೊಂಭತ್ತಾರು ಮತ್ತರು ಭೂಮಿಯನ್ನು ದಾನವಾಗಿ ನೀಡಿದ್ದನ್ನು ಉಲ್ಲೇಖಿಸುತ್ತದೆ.[೬೫] ದೇವಾಲಯಗಳು ವಿದ್ಯಾಕೇಂದ್ರಗಳಾಗಿದ್ದವು ಎನ್ನುವದಕ್ಕೆ ಕೊಕಟನೂರ[೬೬] ಶಾಸನದಲ್ಲಿ ಕೂಚಸೆಟ್ಟಿ ತ್ರೈಪುರುಷ ದೇವಾಲವನ್ನು ಮಾಡಿಸುವುದರೊಂದಿಗೆ ತ್ರೈಪುರುಷ ಶಾಲೆಯನ್ನು ಮಾಡಿಸಿದನೆಂದು ಹೇಳಿರುವುದು ಇದನ್ನು ಸ್ಪಷ್ಟ ನಿದರ್ಶನವಾಗಿದೆ.

ದೇವಸ್ಥಾನ, ಮಠಗಳ ಸಂಪೂರ್ಣ ಹೊಣೆ ಹೊತ್ತ ಸ್ಥಾನಾಚಾರ್ಯರು ನೈಷ್ಠಿಕ ಬ್ರಹ್ಮಚಾರಿಗಳಾಗಿರುವುದರೊಂದಿಗೆ ವಿದ್ಯಾ ಪಕ್ಷಪಾತಿಗಳೂ ಆಗಿದ್ದರು. ಅಥಣಿ ತಾಲೂಕಿನ ಉಮ್ರಾಣಿ ಶಾಸನವು[೬೭] ಸ್ಥಾನಾಚಾರ್ಯರ ಗುರು ಪರಂಪರೆಯನ್ನು ಹೆಸರಿದೆ. "ಚತುರಾಸ್ಯಂಗಂ ವಚನೋವಲ್ಲಭೆಗವಧಿಕ ನೀವಾಂದೇವಬ್ರತೀಂದ್ರ ಪ್ರತಿವಾಭೌಘುಸಿಂಹ ಸಕಳ ಕಳೆಂಯೊಳಂದೆಂಜಿನಂ ಖ್ಯಾತಿವೆತ್ತಂ ಜಿತಬಾಹಾ ಮುಖ್ಯರೂಪಂ ತಪಸ್ಸುತ್ತ್ಯರೂಪಂ – ಕಂದರ್ಪೋಗ್ರಚಾಪಂ ಸ್ಖಳಿತ ವಿಷಯಲೇಪಂ ವೇವಿತ ವಾದಿದೇವ ಮುನಿಗಳಾವಾಸಿಯಾಗಿರ್ದ್ದ ಭೂಮಿನುತಂ ವಾಗ್ವಿನುತಂ–ತತುಶಿಷ್ಯನಾದ ಮಹಾಮನು ಲೋಕಾಭರಣಂ ವ್ರತೀಶ ವಿದ್ವತ್ಸಭಾಸೇಖರಂ ಲೋಕಾಭರಣಂವೃತೀಂದ್ರ ತಿಳಿಕ ವಿಖ್ಯಾತಿವೆತ್ತೊಪ್ಪಿದಂ ॥ ವಾಗುದೇವಿ ಚಾತುರಿ ಯಮಂ ಮೂಗವಟ್ಟರು ಮಿಮಾಂಸಕ ವಾಕು ಪ್ರಗಲ್ಭ್ಯಮಂ ಜೈನ ಬಂಧುರ ಚಂದ್ರಾಭರಣ ವ್ರತೀಶ॥ ಎಂದು ಗುರುಪರಂಪರೆ ಮತ್ತು ಅವರ ವಿದ್ವತ್ತನ್ನು ಹೇಳಿದೆ.

**ವಿದ್ಯಾ ಕೇಂದ್ರಗಳು:**

ಪ್ರಾಚೀನ ಕರ್ನಾಟಕದಲ್ಲಿ ದೇವಸ್ಥಾನಗಳು ಮತ್ತು ಮಠಗಳು ವಿದ್ಯೆ ಕೊಡುವ ಕೇಂದ್ರಗಳಾಗಿದ್ದವು. ದೇವಸ್ಥಾನಕ್ಕೆ ಹೊಂದಿಕೊಂಡ ಮಠಗಳು ನೈಷ್ಠಿಕ ಬ್ರಹ್ಮಚಾರಿಗಳಾದ ಸ್ಥಾನಪತಿ ಹಾಗೂ ತಪೋಧರ ವಾಸಸ್ಥಾನವಾಗಿದ್ದವು.

ವಿದ್ಯಾದಾನವು ಮುಖ್ಯವಾಗಿ ನಾಲ್ಕು ಕೇಂದ್ರಗಳಲ್ಲಿ ನಡೆಯುತ್ತಿದ್ದು, ಅವುಗಳನ್ನು ೧) ಅಗ್ರಹಾರ. ೨) ದೇವಸ್ಥಾನ ಅಥವಾ ಮಠ, ೩) ಬ್ರಹ್ಮಪುರಿ ಮತ್ತು ೪) ಘಟಿಕಾಸ್ಥಾನ ಎಂದು ವಿಂಗಡಿಸಲಾಗಿದೆ.[೧೮] ಅಗ್ರಹಾರ, ಬ್ರಹ್ಮಪುರಿಗಳು ವಿದ್ಯಾವಂತ ಮಹಾಜನರ ವಾಸಸ್ಥಾನಗಳಾಗಿದ್ದರೆ ಘಟಿಕಾಸ್ಥಾನಗಳು ಉನ್ನತ ವಿದ್ಯಾಭ್ಯಾಸ ಕೇಂದ್ರಗಳಾಗಿದ್ದವು. ಮಹಾಗ್ರಹಾರ ಕೊಕಟೂರಿನಲ್ಲಿ ತ್ರೈಪುರುಷ ದೇವಾಲಯ ಮತ್ತು ಅದಕ್ಕೆ ಹೊಂದಿಕೊಂಡು ಶಾಲೆ ಇರುವ ಸಂಗತಿ ಅಲ್ಲಿನ ಶಾಸನದಲ್ಲಿದೆ. ಅದನ್ನು ಮಹಾಮಂಡೇಶ್ವರ ಜೋಗಪಯ್ಯ ಕರಹಡ ನಾಲ್ಸಾಸಿರ ಪ್ರದೇಶವನ್ನು ಆಳುತ್ತಿದ್ದಾಗ, ಕೂಚಿಶೆಟ್ಟಿ ನಿರ್ಮಿಸಿದ್ದು, ಅಲ್ಲಿಯ ವಿದ್ಯಾರ್ಥಿಗಳನ್ನು ಓದಿಸುವ ಉಪಾಧ್ಯಾಯರಿಗೆ ದಾನ ನೀಡಿದ್ದನ್ನು ಅದು ತಿಳಿಸುತ್ತದೆ.[೧೯] ಅಗ್ರಹಾರ ತೆಲಸಂಗ[೨೦] ದಲ್ಲಿ ಐದು ನೂರು ಜನ ವಿದ್ಯಾವಂತ ಸೂರು ಬ್ರಾಹ್ಮಣರಿದ್ದ ಸಂಗತಿಯನ್ನು ಅಲ್ಲಿನ ಶಾಸನ ಉಲ್ಲೇಖಿಸಿದೆ. ಕಣಂಬಡೆ ನಾಡಿನ ಶ್ರೀಮದಗ್ರಹಾರ ಕೊರ್ಗ್ಗೊಟನೂರಿನ ಶ್ರೀಸ್ವಯಂಭು ವಿಶ್ವೇಶ್ವರ ದೇವರ ಸ್ಥಾನಾಚಾರ್ಯ ವಿದ್ಯಾರಾಶಿ ಪಂಡಿತ ದೇವರಿಗೆ ಮತ್ತು ಮಠದ ತಪೊಧನರಿಗೆ ವಿದ್ಯಾರ್ಥಿಗಳಿಗೆ ತುಂಗಳ ಬಳಿಯ ನಾಗರಾಳವನ್ನು ದತ್ತಿಬಿಟ್ಟಿದ್ದನ್ನು ಹೇಳಿದೆ. ಇಲ್ಲಿನ ವಿದ್ಯಾರಾಶಿ ಪಂಡಿತರು ಮಠದ ತಪೋಧನರಿಗೆ, ವಿದ್ಯಾರ್ಥಿಗಳಿಗೆ ಶಿಕ್ಷಣ ನೀಡುತ್ತಿರಬೇಕು. ಇದರಿಂದ ದೇವಾಲಯ ಮತ್ತು ಅದಕ್ಕೆ ಹೊಂದಿಕೊಂಡ ಮಠಗಳಲ್ಲಿ ವಿದ್ಯಾಭ್ಯಾಸ ನಡೆಯುತ್ತಿತ್ತೆಂಬುದು ಸ್ಪಷ್ಟವಾಗುತ್ತದೆ. ಕೊಟ್ಟಲಗಿ ಅಗ್ರಹಾರವಾಗಿರುವದನ್ನು ಕ್ರಿ.ಶ. ೧೧೬೨ ರ ರಾಮತೀರ್ಥ ಶಾಸನವು ಸ್ಪಷ್ಟಪಡಿಸುತ್ತದೆ.

**ಬ್ರಹ್ಮಪುರಿ:**

ನಗರಗಳಲ್ಲಿ ಅಥವಾ ಪಟ್ಟಣಗಳಲ್ಲಿ ಬ್ರಾಹ್ಮಣ ವಿದ್ವಾಂಸರು ವಾಸಿಸುವ ಭಾಗವೇ ಬ್ರಹ್ಮಪುರಿ, ಅಗ್ರಹಾರಗಳು ಊರುಗಳಾದರೆ ಬ್ರಹ್ಮಪುರಿಗಳು ಪಟ್ಟಣಗಳ ಭಾಗಗಳು. ಅಗ್ರಹಾರಗಳಿಗಿಂತ ಬ್ರಹ್ಮಪುರಿಗಳ ಸಂಖ್ಯೆ ಕಡಿಮೆ. ಏಕೆಂದರೆ ಪ್ರಾಚೀನ ಕರ್ನಾಟಕದಲ್ಲಿ ಹಳ್ಳಿಗಳ ಸಂಖ್ಯೆ ಹೆಚ್ಚು. ನಗರಗಳ ಸಂಖ್ಯೆ ಕಡಿಮೆ. ಅಗ್ರಹಾರಗಳಲ್ಲಿದ್ದ ಬ್ರಾಹ್ಮಣರು ಆ ಊರುಗಳ ಒಡೆಯರು. ಆದರೆ ಬ್ರಹ್ಮಪುರಿಗಳಲ್ಲಿದ್ದ ಬ್ರಾಹ್ಮಣರು. ಆ ಊರಿನ ಇತರ ಪಂಗಡಗಳ ಜನರಿದ್ದಂತೆಅಗ್ರಹಾರದ ಬ್ರಾಹ್ಮಣರಿಗಿದ್ದ ಅಧಿಕಾರ ಇವರಿಗಿರಲಿಲ್ಲ.[೨೧]
ಜತ್ತಿ ತಾಲೂಕಿನ ಉಮ್ರಾಣಿ ಶಾಸನವು ಬ್ರಹ್ಮಪುರಿಯನ್ನು ಉಲ್ಲೇಖಿಸಿದೆ. ಅದು ಚಕ್ರವರ್ತಿ ಜಜ್ಜಳದೇವನ ಮಹಾಮಂಡಳೇಶ್ವರ ಪಾಪಿನ ಪೆಮ್ಮಾಡಿಯರಸರು ಸಹಿತವಾಗಿ ಕಲ್ಲಿಸೆಟ್ಟಿಯು

ಉಂಬರವಾಣಿಯ ನಾನಾದೇಶಿ ಪ್ರವಾಸಿಗ ಬ್ರಾಹ್ಮಣರಯ್ವರ ಸತ್ರದಾಹಾರದಾನಕ್ಕೆ ಭೂಮಿದಾನ ಬಿಟ್ಟದ್ದನ್ನು ತಿಳಿಸುತ್ತದೆ.[೨] ಹಾಗೇ ಬಾಡಗಿ ಶಾಸನವು ಮೈಳುಗಿ ದೇವನ ಅನುಮತಿಯಿಂದ ಬಾಡಗಿಯ ಚೌಡಭಟ್ಟೋಪಾಧ್ಯಾಯ ಮತ್ತು ಅವನ ಮಗ ಚಕ್ರಿಭಟ್ಟೋಪಾಧ್ಯಾರು ಬಾಡಿಗೆಯ ಲಕ್ಷ್ಮಣೇಶ್ವರ ದೇವರಿಗೆ ಭೂಮಿದತ್ತಿ ನೀಡಿದ್ದನ್ನು ಉಲ್ಲೇಖಿಸುತ್ತ, ಬಾಡಿಗೆಯ ಬ್ರಹ್ಮಪುರಿಯ ನಾನಾ ಗೋತ್ರದ ಬ್ರಾಹ್ಮಣರಿಗೆ ಭೂಮಿ ದಾನ ನೀಡಿದ್ದನ್ನು ಪ್ರಸ್ತಾಪಿಸುತ್ತದೆ.

**ಘಟಿಕಾಸ್ಥಾನ:**

ವೈದಿಕ ಬ್ರಾಹ್ಮಣರಿಗೆ ವಿದ್ಯಾಕೇಂದ್ರಗಳಾಗಿದ್ದ, ದೇವಸ್ಥಾನಗಳಿಗೆ ಮತ್ತು ಜ್ಯೋತಿಷ್ಯರಿಗೆ ಅಗತ್ಯವಾಗಿರಬೇಕಾಗಿರುವ ಘಳಿಗೆ ಬಟ್ಟಲುಗಳ ಘಟಿಕಾಯಂತ್ರ ಸ್ಥಾಪನೆಯಿಂದ ಘಟಿಕಾ ಸ್ಥಾನವೆಂಬ ಹೆಸರು ಬಂದಿರ ಬಹುದು ಎನ್ನುತ್ತಾರೆ ಚಿದಾನಂದಮೂರ್ತಿಯವರು. ಈ ಊಹೆಯನ್ನು ಸದ್ಯಕ್ಕೆ ಸ್ವೀಕರಿಸಬಹುದು ಎಂಬ ಡಾ. ಎಸ್. ಕೆ. ಕೊಪ್ಪಾ ಅವರ ಹೇಳಿಕೆ ಸಮಂಜಸವಾಗಿದೆ.[೩] ಅಥಣಿ ತಾಲೂಕಿನ ಶಾಸನಗಳಲ್ಲಿ ಘಟಿಕಾಸ್ಥಾನದ ಕುರಿತು ಯಾವುದೇ ಉಲ್ಲೇಖ ಬರದಿದ್ದರೂ. ಕನ್ನಡ ಶಾಸನಗಳಲ್ಲಿ ವಿದ್ವಾಂಸರ ಹೆಸರುಗಳ ಹಿಂದೆ ಕಾಣಿಸಿಕೊಳ್ಳುವ ಘಟಿಕಾ ಸಾಹಸ, ಘಳಿಸಾಸ, ಘೈಸ ಎಂಬ ವಿಶೇಷಣವನ್ನು ಗಮನಿಸಿದ ಡಾ. ಎಂ. ಚಿದಾನಂದಮೂರ್ತಿಯವರು ಘಟಿಕಾ ಸ್ಥಾನಗಳಲ್ಲಿ, ವಿದ್ವಾಂಸರ ಚರ್ಚೆಗಳು, ವಾದ ವಿವಾದಗಳು ನಡೆಯುತ್ತಿದ್ದವು. ಅಲ್ಲಿ ಜ್ಞಾನದ ಸಾಹಸವನ್ನು ಪ್ರದರ್ಶಿಸಿ ಮನ್ನಣೆ ಪಡೆದವನೆಂದು ಜನ ಈ ವಿಶೇಷಣದಿಂದ ಭಾವಿಸುತ್ತಿದ್ದಿರಬೇಕೆಂದಿದ್ದಾರೆ. ಜತ್ತ ತಾಲೂಕಿನ ಉಮ್ರಾಣಿ ಶಾಸನದಲ್ಲಿ[೪] ಚಿದ್ಬಿಯಂಣ ಘೈಸಾಸ, ಮತ್ತು ಮಾಳಿಯಣ ಘೈಸಾಸರ ಉಲ್ಲೇಖ ಬಂದಿದೆ. ಬಾಡಗಿ ಶಾಸನವು ಜಾತವೇದ ಘಳಸಾಸರನ್ನು ಹೆಸರಿಸಿದೆ.[೫] ಉಮ್ರಾಣಿಶಾಸನ 'ಮಾಳಿಯಣ್ಣ ಘೈಸಾಸರ ವೃತ್ತಿಯ ಪಿರಿಯ ಕೋಲ ಮತ್ತರೆರಡು' ಎಂದು ಹೇಳುವುದರಿಂದ ವಿದ್ಯಾವಂತರಾದ ಇವರಿಗೆ ಸಮಾಜದಲ್ಲಿ ಗೌರವಯುತ ಸ್ಥಾನ ದೊರಕಲು ಸಾಕು. ಹೀಗಾಗಿ ಅವರ ಹೆಸರಿನ ಅಳತೆಕೋಲು ಇದಾಗಿರಬೇಕೆಂದು ಸ್ಪಷ್ಟವಾಗುತ್ತದೆ.

**ಪ್ರಾಥಮಿಕ ಶಿಕ್ಷಣ:**

ಪ್ರಾಥಮಿಕ ಶಿಕ್ಷಣದ ಕುರಿತು ಶಾಸನಗಳು ಹೆಚ್ಚಿನ ವಿವರಗಳನ್ನು ಒದಗಿಸುವದಿಲ್ಲ. ಬಾಲಕರಿಗೆ ಪಾಠವನ್ನು ಹೇಗೆ ಆರಂಭಿಸುತ್ತಿದ್ದರು, ಯಾವ ಪುಸ್ತಕದಿಂದ ಆರಂಭಿಸುತ್ತಿದ್ದರು ಎಂಬುದರ ಪರಿಚಯ ಶಾಸನಗಳಿಂದಾಗಲಿ, ಕಾವ್ಯಗಳಿಂದಾಗಲಿ ನಮಗಾಗುವದಿಲ್ಲ. ದತ್ತಿಗಳನ್ನು ಕೊಟ್ಟಿರುವುದು ಪ್ರೌಢ ವಿದ್ಯಾಭ್ಯಾಸಕ್ಕೆ ಆದರೂ ಒಂದೆರಡು ಶಾಸನಗಳಲ್ಲಿ ದೊರಕುವ ಪ್ರಾಥಮಿಕ ವಿದ್ಯಾಭ್ಯಾಸಕ್ಕೆ ಸಂಬಂಧಪಟ್ಟ ವಿವರಗಳಿಂದ ನಾವು ತೃಪ್ತಿ ಪಟ್ಟುಕೊಳ್ಳಬೇಕಾಗಿದೆ. ತಾಳಗುಂದದ ಶಾಸನವೊಂದರಲ್ಲಿ ವೇದಾಧ್ಯಯನ ಮುಂತಾದವುಗಳಿಗೆ

ಕೊಟ್ಟ ವತ್ತಿಗಳ ಜೊತೆಯಲ್ಲಿ "ಕನ್ನಡಕ್ಷರ" ಶಿಕ್ಷಕನಿಗೂ ದತ್ತಿಯನ್ನು ಬಿಟ್ಟುಕೊಟ್ಟಂತೆ ಹೇಳಿದೆ. ಬಹುಶಃ ಆ ಕಾಲದಲ್ಲಿ ಬಾಲಕರಿಗೆ ಮೊದಲು ಕನ್ನಡ ಅಕ್ಷರವನ್ನು ಕಲಿಸುತ್ತಿದ್ದಂತೆ ಕಾಣುತ್ತದೆ.[೭೬] ಅಥಣಿ ಪ್ರದೇಶದ ನಾಡಿನಲ್ಲಿ ಪ್ರಾಥಮಿಕ ಶಿಕ್ಷಣದ ಕುರಿತು ವಿವರಣೆ ಸಿಗುವುದಿಲ್ಲ. ಆದರೆ ವೇದಗಳಲ್ಲಿ ಪರಿಣಿತಿ ಹೊಂದಿದ ವಿದ್ವಾಂಸರನ್ನು ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ.

**ಪ್ರೌಢ ಶಿಕ್ಷಣ:**

ಪ್ರೌಢ ವಿದ್ಯಾಭ್ಯಾಸ ಮಾಡುವ ವಿದ್ಯಾರ್ಥಿಗಳೇ ಛಾತ್ರರು. ಛಾತ್ರರಿಗೆ ವಿದ್ಯಾಭ್ಯಾಸ ಮಾಡಿಸುವ ಉಪಾಧ್ಯಾಯರಿಗೆ ಭಟ್ಟ ವೃತ್ತಿಯನ್ನು ಬಿಟ್ಟುಕೊಡುತ್ತಿದ್ದರು.[೭೭] ಅಥಣಿ ತಾಲೂಕಿನ ಬಾಡಗಿ[೭೮] ಶಾಸನದಲ್ಲಿ ಚೂಡಾಮಣಿ ನಾಗದೇವ ಭಟ್ಟೋಪಾಧ್ಯಾಯರ ಮಗಂ ಗೋವಿಂದಭಟ್ಟರು ಮತ್ತು ವಿಶ್ವಾಮಿತ್ರ ಗೋತ್ರ ಪವಿತ್ರ ಚೂಡಾಮಣಿ ಮಂಕಣ ಭಟ್ಟೋಪಾಧ್ಯಾಯರನ್ನು ಹೆಸರಿಸಿದೆ. ಕೊಕಟನೂರ[೭೯] ಶಾಸನವು ಕೊಚಿಶೆಟ್ಟಿ ತಾನು ಮಾಡಿಸಿದ ತ್ರೈಪುರುಷ ದೇವರಿಗೆ ದತ್ತಿ ಬಿಡುವಾಗ ಶಾಲೆಯಲ್ಲೋದುವ ವಿದ್ಯಾರ್ಥಿಗಳಿಗೆ ಮತ್ತು ಈದಿಸುವ ಉಪಾಧ್ಯಾಯರಿಗೆ ಮತ್ತು ಮಾಣಿಯರ ವಸತಿ ಹಾಗೂ ಆಹಾರಕ್ಕೆ ಜನ್ನವಾಡ ಗ್ರಾಮದತ್ತಿಯಾಗಿ ಬಿಟ್ಟದ್ದನ್ನು ಹೇಳಿದೆ. ಮತ್ತೊಂದು ಶಾಸನದಲ್ಲಿ ಕೊಕಟನೂರಿನ ಸ್ವಯಂಭು ವಿಶ್ವೇಶ್ವರ ದೇವರು ಆಚಾರ್ಯ ವಿದ್ಯಾರಾಶಿ ಪಂಡಿತರಿಗೆ ದೇವರ ಅಂಗಭೋಗ ಮತ್ತು ಖಂಡಸ್ಫುಟಿತ ಜೀರ್ಣೋದ್ಧಾರಕ್ಕಾಗಿ ಮತ್ತು ಮಠದತಪೋಧನರು ಹಾಗೂ ವಿದ್ಯಾರ್ಥಿಗಳಿಗಾಗಿ ಕಣಂಬಡೆ ನಾಡಿನ ತುಂಗಳ ಹನ್ನೆರಡರ ನಾಗರಾಳ ಗ್ರಾಮವನ್ನು ದತ್ತಿಯಾಗಿ ನೀಡಿದ್ದನ್ನು ಉಲ್ಲೇಖಿಸಿದೆ. ಕ್ರಿ.ಶ.೧೧೨೩ ರ ಉಮರಾಣಿ ಶಾಸನ ಕೊಟ್ಟಲಗಿಯ ಕರಿಯ ಕಾಳಿದಾಸ ಭಟ್ಟೋಪಾಧ್ಯಾಯರನ್ನು ಹೆಸರಿಸುತ್ತದೆ.

**ಪಠ್ಯಕ್ರಮ:**

ವೇದಗಳನ್ನು ಭಾಗ ಭಾಗಗಳಾಗಿ ಅಧ್ಯಯನ ಮಾಡುವುದನ್ನು ವೇದ ಖಂಡಿಕವೆಂದೂ ಪಾಠ ಹೇಳುವ ಉಪಾಧ್ಯಾಯನನ್ನು ಖಂಡಿಕೋಪಾಧ್ಯಾಯನೆಂದೂ ವಿದ್ಯಾರ್ಥಿಯನ್ನು ಖಂಡಿಕ ವಿದ್ಯಾರ್ಥಿಯೆಂದೂ ಕರೆದಿರುವುದನ್ನು ವಿದ್ವಾಂಸರು ಗಮನಿಸಿದ್ದಾರೆ.[೮೦] ಸ್ಥಾನಾಚಾರ್ಯರು ಮತ್ತು ಮಹಾಜನಿಗೆ ದತ್ತಿಯನ್ನು ಕೊಡುವಾಗ ಅವರ ಪಾಂಡಿತ್ಯ ವಿದ್ವತ್ತುಗಳನ್ನು ವರ್ಣಿಸಲಾಗಿದೆ.ಅವರ ಹೆಸರಿನ ಹಿಂದೆ ಇರುವ ವಿಶೇಷಣಗಳನ್ನು ಅವಲೋಕಿಸಿದಾಗ ಅಂದಿನ ಕಾಲದಲ್ಲಿ ಅವರು ಒಂದೊಂದು ವಿಷಯದಲ್ಲಿ ಪಾಂಡಿತ್ಯವನ್ನು ಪಡೆದಿದ್ದರು ಎನ್ನುವದು ಸ್ಪಷ್ಟವಾಗುತ್ತದೆ. ಉಮ್ರಾಣಿ ಶಾಸನ ನಾಲ್ಕು ವೇದಗಳಲ್ಲಿ ಪರಿಣಿತಿಯನ್ನು ಹೊಂದಿದ ಮಹಾಜನರಿದ್ದರೆಂದು ಹೇಳಿದರೆ ಬಾಡಗಿ ಶಾಸನವು ಜಾತವೇದ ಘಳಿಸಾಸರನ್ನು ಹೆಸರಿಸಿದೆ. ಉಮ್ರಾಣಿ ಶಾಸನವು ಸ್ಥಾನಾಚಾರ್ಯ ಚಂದ್ರಾಭರಣರನ್ನು

ಮೀಮಾಂಸಕ ವಾಕು ಪ್ರಾಗಲ್ಭ್ಯ ಜೈನ ಬಂಧುರ ಎಂದು ಕರೆದಿದೆ.[೮೧] ದೇವಾಲಯಗಳಲ್ಲಿ ವಿದ್ಯೆಯನ್ನು ಪಡೆಯುವ ಅಗ್ರಹಾರದ ಮಹಾಜನರು ವೇದಾಧ್ಯಯನದಲ್ಲಿ ತೊಡಗಿದರೆ, ಶೈವರಿಗಾಗಿ ಶೈವಾಗಮಗಳೂ ಇರುತ್ತಿದ್ದವು. ಕಣಂಬಡೆ ನಾಡಿನ ಕೊಕಟನೂರು ಶಾಸನವು ಶೈವಾಗಮಗಳನ್ನು ಅನುಸರಿಸಿದ ಭಾಯಿದೇವನನ್ನು ಹೆಸರಿಸಿ, ಅವನ ಶಿಷ್ಯ ಮಲ್ಲಿದೇವನನ್ನು ಶಿವ್ಯಕ್ತನೆಂದು ಕರೆದಿದೆ.

**ಸ್ತ್ರೀ ಶಿಕ್ಷಣ:**

ಪ್ರಾಚೀನ ಕರ್ನಾಟಕದಲ್ಲಿ ರಾಜಮನೆತನದ ಸ್ತ್ರೀಯರು, ಪ್ರಧಾನಮಂತ್ರಿ, ದಂಡನಾಯಕ ಮುಂತಾದ ದೊಡ್ಡ ಅಧಿಕಾರಿಗಳ ಹೆಣ್ಣು ಮಕ್ಕಳು ತಕ್ಕ ಮಟ್ಟಿಗೆ ವಿದ್ಯಾವಂತರಾಗಿರುತ್ತಿದ್ದರು.ಅವರಿಗೆ ನರ್ತನ ಸಂಗೀತ ಮುಂತಾದ ಕಲೆಗಳಲ್ಲಿ ವಿದ್ಯೆ ನೀಡಲಾಗುತ್ತಿತ್ತು. ಆದರೆ ಯಾವಿದೇ ಶಾಸನದಲ್ಲಿ ಸ್ತ್ರೀ ವಿದ್ಯಾರ್ಥಿನಿಯ ಹೆಸರು ಪಂಡಿತೆಯರ ಹೆಸರು ಕಂಡುಬರುವುದಿಲ್ಲ ಎಂಬ ಅಂಶವನ್ನು ಅನೇಕ ವಿದ್ವಾಂಸರು ಸ್ಪಷ್ಟಪಡಿಸಿದ್ದಾರೆ. ಜತ್ತ ತಾಲೂಕಿನ ವಳಸಂಗ ಶಾಸನವು ಆರನೇ ವಿಕ್ರಮಾದಿತ್ಯನ ಪಟ್ಟಮಹಿಷಿ ಚಂದಲದೇವಿ 'ಅಭಿನವ ಶಾರದೆಯಾಗಿದ್ದಳು' ಎಂದು ಹೇಳಿದೆ.[೮೨]

**ಧಾರ್ಮಿಕ ವ್ಯವಸ್ಥೆ:**

ಭಾರತೀಯ ಸಂಸ್ಕೃತಿಯಲ್ಲಿ ಧರ್ಮವೆಂಬುದಕ್ಕೆ ವಿಶಾಲವಾದ ಅರ್ಥವಿದೆ. ಧರ್ಮವೆಂಬುದು ನಮ್ಮ ಜನತೆಯ ಜೀವನವನ್ನು ಸಮಗ್ರವಾಗಿ ತುಂಬಿಕೊಂಡಿರುವ ಸತ್ವ, ಸಾಹಿತ್ಯ, ಸಂಗೀತ, ನೃತ್ಯ ಶಿಲ್ಪ ಮೊದಲಾದ ಕಲೆಗಳಿಗೂ ಧರ್ಮವೇ ಮೂಲ ಪ್ರೇರಣೆ. ಧರ್ಮ ಕಲೆಗಳನ್ನು ಬೆಳೆಸಿತು. ಕಲೆಗಳು ಧರ್ಮವನ್ನು ಬೆಳೆಸಿದವು.[೮೩] ಮಾನವ ತನ್ನ ಜೀವನದ ಎಲ್ಲ ಕ್ಷೇತ್ರಗಳಲ್ಲಿಯೂ ಧರ್ಮವನ್ನು ಅಳವಡಿಸಿಕೊಂಡು ವೇದ, ಉಪನಿಷತ್, ಆಗಮ, ಸ್ಮೃತಿಗಳು, ಇತಿಹಾಸ ಪುರಾಣಗಳನ್ನು ನಿರೂಪಿಸಿದ. ಧರ್ಮವು ಸಂಸ್ಕೃತಿಯ ಅಂಗವಾಗಿ ಬೆಳೆಯಿತಲ್ಲದೆ, ಪರಂಪರೆಯನ್ನು ಬೆಳೆಯಿಸುವುದಕ್ಕೆ ಪ್ರೇರಣೆಯಾಯಿತು.ಕನ್ನಡ ನಾಡಿನ ಇತಿಹಾಸದೊಂದಿಗೆ ಚತುಸ್ಸಮಯಗಳಾದ ಬೌದ್ಧ, ಜೈನ, ವೈಷ್ಣವ ಹಾಗೂ ಶೈವ ಧರ್ಮಗಳು ಕಾಣಿಸಿಕೊಳ್ಳುತ್ತವೆ. ಈ ಚತುಸ್ಸಮಯಗಳಲ್ಲಿ ಯಾವುದು ಮೊದಲು ಯಾವುದು ಅನಂತರ ಎಂದು ಖಚಿತವಾಗಿ ಹೇಳುವುದು ಕಷ್ಟಸಾಧ್ಯವಾದರೂ, ತೀರ ಪ್ರಾಚೀನ ಕಾಲದಲ್ಲಿಯೇ ಕರ್ನಾಟಕ ಶೈವ ಹಾಗು ವೈದಿಕ ಸಂಸ್ಕೃತಿಯ ಗಾಢಪ್ರಭಾವಕ್ಕೆ ಒಳಗಾಗಿತ್ತೆನ್ನಬಹುದು. ಕ್ರಮೇಣ ಜಾತಿಗಳಾಗಿ ಶೋಷಣೆ ಹೆಚ್ಚಿದಂತೆ ಬೌದ್ಧ, ಜೈನ ಧರ್ಮಗಳು ಜನತಾಳಿ ತಮ್ಮ ಕ್ರಿಯಾಶೀಲತೆಯನ್ನು ಹೆಚ್ಚಿಸಿಕೊಂಡವು. ಕಾಲಗತಿಸಿದಂತೆ ಸ್ಥಳೀಯ ಮತ ಪ್ರಭೇಧಗಳು ಇವುಗಳೊಂದಿಗೆ ಕೂಡಿದವು. ಇವುಗಳಿಂದ ಬೇಸತ್ತ ಜನತೆಗೆ ಹನ್ನೆರಡನೆಯ ಶತಮಾನದ ಶಿವಶರಣರು ಹೊಸ ಸಿದ್ಧಾಂತವನ್ನು ಮುಂದಿಟ್ಟರು. ಅದೇ

ಅಭಿನವ ಪಾಶುಪತ ಸಿದ್ಧಾಂತ,[೮೪] ಇವುಗಳ ಹಿನ್ನೆಲೆಯಲ್ಲಿ ಅಥಣಿ ತಾಲೂಕಿನ ಧಾರ್ಮಿಕ ಜೀವನವನ್ನು ವಿವೇಚಿಸಲಾಗಿದೆ.

**ಬೌದ್ಧ ಧರ್ಮ:**

ಚತುಸ್ಸಮಯಗಳಲ್ಲಿ ಒಂದಾದ ಬೌದ್ಧ ಧರ್ಮವು ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದಲ್ಲಿ ಇದ್ದುದರ ಕುರಿತು ಹಲವಾರು ಸಂಗತಿಗಳು ತಿಳಿದು ಬಂದಿವೆ. ಅಥಣಿ ತಾಲೂಕಿನ ನೆರೆಯ ತರ್ದವಾಡಿನಾಡಿನಲ್ಲಿ ಬೌದ್ಧಧರ್ಮದ ಕುರಿತು ಇಂಡಿ ಶಾಸನದಲ್ಲಿ ಬೌದ್ಧಾಲಯ ಮತ್ತು ಬೌದ್ಧರು ಇದ್ದ ಉಲ್ಲೇಖವಿದೆ.[೮೫] ಆದರೆ ಅಥಣಿ ತಾಲೂಕಿನಲ್ಲಿ ಬೌದ್ಧರ ಕುರಿತು ಯಾವುದೇ ಉಲ್ಲೇಖಗಳು ಕಂಡುಬರುವುದಿಲ್ಲ.

**ಜೈನ ಧರ್ಮ:**

ಪ್ರಾಚೀನ ಕರ್ನಾಟಕದಲ್ಲಿ ಜೈನಧರ್ಮವು ತನ್ನ ಗಾಢವಾದ ಪ್ರಭಾವವನ್ನು ಬೀರಿತ್ತು. ಇಲ್ಲಿನ ಅರಸರು, ಸಾಮಂತರು, ಜೈನ ಧರ್ಮವನ್ನು ರಕ್ಷಿಸಿದರು. ಇದರಿಂದ ಅದು ಭದ್ರವಾದ ನೆಲೆಯನ್ನು ಕಂಡುಕೊಳ್ಳುವಂತಾಯಿತು.ಆದರೆ ಕಣಂಬಡೆ ನಾಡಿನಲ್ಲಿ ಜೈನ ಧರ್ಮ ಪ್ರಚಾರದಲ್ಲಿದ್ದಂತೆ ಕಂಡುಬರುವುದು. ಈ ನಾಡಿನ ಹೆಚ್ಚಿನ ಶಾಸನಗಳು ಜೈನಧರ್ಮದ ಕುರಿತು ಮೌನತಾಳಿವೆ. ಪ್ರಾಚೀನ ಕಾಲದ ಜೈನ ಬಸದಿಗಳು ವಿರಳವಾಗಿ ಈ ನಾಡಿನಲ್ಲಿ ಕಂಡುಬರುತ್ತವೆ. ವಿರಳವೆಂಬಂತೆ ಅಥಣಿ ತಾಲೂಕಿನ ಬಳ್ಳಿಗೆರಿ ಜೈನ ಶಾಸನ.[೮೬] ಜತ್ತ ತಾಲೂಕಿನ ಉಂಬರವಾಣಿ ಶಾಸನ[೮೭] ಜಿನಾಲಯದ ಕುರಿತು ಉಲ್ಲೇಖಿಸುತ್ತದೆ. ಕ್ರಿ. ಶ. ೧೧೬೪ರ ಉಮ್ರಾಣಿ ಶಾಸನದಲ್ಲಿ ಕಲ್ಲಿಸೆಟ್ಟಿಯು ಪ್ರವಾಸಿಗ ಬ್ರಾಹ್ಮಣರಿಗೆ ದತ್ತಿಯನ್ನು ಕೊಡುವಾಗ 'ತೆಂಕಲನಾಮಿಕ ಜಿನಾಲಯಗೆಯ್ಯಂ ಪಡುವಲಿರ್ದ್ದ ಸ್ಥಳದ ಹಿರಿಯ ಕೋಲಮತ್ತರು ಕ್ರಯವಂ' ಮಾಡಿ ಸತ್ರದ ಆಹಾರ ದಾನಕ್ಕೆ ದತ್ತಿಬಿಟ್ಟಿದ್ದನ್ನು ಹೇಳಿದೆ. ಮುಂದುವರಿದು, ಇದೆ ಶಾಸನ ರಾಯಮುರಾರಿ "ಸೋವಿದೇವನ ಮನ್ನೆಯರ ಕಯಯಲು, ಬಸದಿಯಿಂ ಪಡುವ ತೆಂಕಣ ಬೀರನ ಬಟ್ಟೆಯಿಂ ಬಡಗ ರಾಜಬೀದಿಯಂ ಮೂಡಣ ಚದುರಸ ವೊಂಬತ್ತು ಕೆಯ್ಯ ನಿವೇಶಣವನಾ ಕಲ್ಲಿಸೆಟ್ಟಿ ಧಾರೆಯ ಪಡೆದು ನಾನಾ ದೆಸಿ ಪ್ರವಾಸಿ ಬ್ರಾಹ್ಮಣರ ಸತ್ರಕ್ಕೆ ಭೋಜನ ಶಾಲೆಯಂ ಮಾಡಿ ಬಿಟ್ಟನು" ಎಂದು ಹೇಳಿರುವುದರಿಂದ ಉಮ್ರಾಣಿಯಲ್ಲಿ ಜಿನಾಲಯ ಮತ್ತು ಬಸದಿಯ ಕುರಿತು ಉಲ್ಲೇಖ ಬರುತ್ತದೆ. ಆದರೆ ಇಲ್ಲಿ ಜೈನ ಬಸದಿಯ ಯಾವ ಕುರುಹುಗಳು ಇರುವುದಿಲ್ಲ.

ಬಸದಿ :

ಅಥಣಿ ನಾಡಿಗೆ ಹೊಂದಿಕೊಂಡಿರುವ ಮೂವತ್ತಾರುಂಬಾಡದ ರಾಜಧಾನಿ ಉಂಬರವಾಣಿಯಲ್ಲಿ ಸಮಾವಿಷ್ಟವಾಗಿರುವ ಬಳ್ಳಿಗೇರಿಯ ಶಾಸನವು[೮೮] ಕಲಚೂರಿ ಚಕ್ರವರ್ತಿ ಬಿಜ್ಜಳನ ಸಹೋದರ "ಮೈಳುಗಿದೇವನು ಕ್ರಿ. ಶ. ೧೧೫೭ರಲ್ಲಿ ಮುಳಗುಂದದಲ್ಲಿ

ರಾಜ್ಯಂಗೈಯ್ಯುತ್ತಿದ್ದಾಗ ಆತನ ಪಾದಪದ್ಮೋಪ ಜೀವಿ ಸಚಿವ ಕಾಳಿದಾಸ ಚರ್ಮನಾಥನು ಬಳ್ಳಿಗೇರಿಯಲ್ಲಿ ಮಾಡಿಸಿದ ಪಾರ್ಶ್ವತೀರ್ಥ ಜಿನಾಲಯಕ್ಕೆ ನಿತ್ಯಾರ್ಚನೆಗಾಗಿ ಮತ್ತು ಅಲ್ಲಿಯ ಋಷಿಯರ ಆಹಾರದಾನಕ್ಕಾಗಿ ಭೂಮಿ ತೋಟ, ದತ್ತಿಬಿಟ್ಟಿದ್ದನ್ನು ಹೇಳಿದೆ. ಹಾಗೂ ಬಸದಿಯ ಪೂಜಾರಿಗಳಗೆ ಹರೆಕಾರರಿಗೆ, ದತ್ತಿ ನಿಡಿರುವ ಸಂಗತಿ ಉಲ್ಲೇಖಿತವಾಗಿದೆ. ಈ ಪಾರ್ಶ್ವನಾಥ ಬಸದಿಗೆ ಅರಸರಲ್ಲದೆ, ಬಳ್ಳಿಗೇರಿಯ ಪ್ರಭುಗಳು ಎಂಟು ಹಿಟ್ಟು ಶಾಸನಿಗರು, ದಾನ ನೀಡಿದ ವಿಷಯ ಸ್ಪಷ್ಟವಾಗುತ್ತದೆ. ಈ ಹಿನ್ನಲೆಯಲ್ಲಿ ಅಥಣಿ ನಾಡಿನಲ್ಲಿ ಜೈನ ಬಸದಿ ಕಟ್ಟಿಸಿದ ಸಂಗತಿಯನ್ನು ಹೇಳುವ ಒಂದೆರಡು ಶಾಸನಗಳು ನಮಗೆ ಲಭ್ಯವಾಗುತ್ತವೆ. ಬಹುತೇಕ ಶಾಸನಗಳು ನೀರಾವರಿಯಿಂದಾಗಿ ನೀರಿನಲ್ಲಿ ಮುಳುಗಿಹೋಗಿವೆ.

ಈ ನಾಡಿನ ತೆಲಸಂಗ ಗ್ರಾಮದಲ್ಲಿ ಜೈನ ಬಸದಿಗಳಿದ್ದ ಕುರಿತು ಶಾಸನಗಳಲ್ಲಿ ಎಲ್ಲಿಯು ಉಲ್ಲೇಖ ಬರುವುದಿಲ್ಲ. ಆದರೆ ಜಿನಮೂರ್ತಿಶಿಲ್ಪವು ಇತ್ತೀಚೆಗೆ ದೊರಕಿದ್ದು ಇದರಿಂದ ವಾಸ್ತವವಾಗಿ ಜೈನ ಬಸದಿ ಇತ್ತು ಎಂದು ತಿಳಿಯಬಹುದಾಗಿದೆ.[೮೯]

**ಗಣ – ಗಚ್ಛ – ಅನ್ವಯ – ಬಳಿ:**

ಜೈನ ದಿಗಂಬರ ಪಂಥ ಪ್ರಾಚೀನ ಕಾಲದಿಂದ ಕರ್ನಾಟಕದಲ್ಲಿ ಪ್ರಸಿದ್ಧಿ ಪಡೆದಿರುವುದನ್ನು ವಿದ್ವಾಂಸರು ಶಾಸನಗಳಿಂದ ಸ್ಪಷ್ಟಪಡಿಸಿದ್ದಾರೆ. ಕಣಂಬಡೆ ನಾಡಿನಲ್ಲಿಯು ಈ ಪಂಥವಿರುವುದಾಗಿ ಶಾಸನ–ಶಿಲ್ಪಗಳಿಂದ ತಿಳಿದುಬರುತ್ತದೆ. ಜೈನಧರ್ಮದ ಪ್ರಸಾರಕಾರ್ಯ ವಿವಿಧ ಸಂಘಗಳ ನೇತೃತ್ವದಲ್ಲಿ ನಡೆಯುತ್ತಿತ್ತು. ಜೈನಧರ್ಮದಲ್ಲಿ ದಿಗಂಬರ ಹಾಗೂ ಶ್ವೇತಾಂಬರಗಳೆಂಬ ಎರಡು ಪಂಗಡಗಳಿದ್ದವು. ಕರ್ನಾಟಕದಲ್ಲಿ ದಿಗಂಬರ ಪಂಗಡ ಪ್ರಚಲಿತದಲ್ಲಿತ್ತು. ಈ ದಿಗಂಬರ ಪರಂಪರೆಯಲ್ಲಿ ಅತ್ಯಂತ ಪ್ರಾಚೀನ ಸಂಘವನ್ನು ಮೂಲ ಸಂಘವೆಂದು ಕರೆಯಲಾಗಿದೆ. ಶ್ರವಣಬೆಳಗೊಳದ ಶಾಸನವೊಂದರಲ್ಲಿ ಆಚಾರ್ಯ ಅರ್ಹದ್ವಲಯ, ಈ ಮೂಲ ಸಂಘವನ್ನು ಸೇನ, ನಂದಿ, ದೇವ, ಸಿಂಹ ನಾಲ್ಕು ಎಂದು ಹೇಳಿದರೆ, ಇಂದ್ರ ನಂದಿ ಇವುಗಳನ್ನೇ ನಾಲ್ಕು ಸಂಘಗಳೆಂದು ಹೆಸರಿಸಿರುವುದನ್ನು ಗಮನಿಸಿದ. ಡಾ. ಎಸ್. ಕೆ. ಕೊಪ್ಪಾ ಅವರು ಸಲ ಸಂಘ, ಗಣ ಅನ್ವಯಗಳನ್ನು ಸಮಾನಾರ್ಥಗಳಲ್ಲಿ ಬಳಸಲಾಗಿದೆ ಎಂದಿದ್ದಾರೆ.[೯೦] ಈ ನಾಡಿನ ಬಳ್ಳಿಗೇರಿ ಶಾಸನ[೯೧] ದಲ್ಲಿ "ಮೂಲಸಂಘ ಕೊಂಡಕುಂದಾನ್ವಯದ ಉಲ್ಲೇಖ ಬಂದಿದೆ. ಇದೇ ಶಾಸನದಲ್ಲಿ ಆಚಾರ್ಯರರ ಪರಂಪರೆಯನ್ನೂ ಹೇಳಿದ್ದನ್ನು ಗಮನಿಸಬಹುದಾಗಿದೆ.

ದೇವೇಂದ್ರಮುನಿ

ನಾಗೇಂದ್ರ ಮುನಿ

ಪಾರ್ಶ್ವಭಟ್ಟಾರಕ

↓

ಗೋಲ್ಲಾಚಾರ್ಯ

↓

ನಂದಿಬ್ರತೀಂದ್ರ

↓

ಶ್ರೀ ಪ್ರಭಚಂದ್ರ

ಈ ಆಚಾರ್ಯರು ತಪಸ್ಸು ಮತ್ತು ವಿದ್ವತ್ಪ್ರತಿಭೆಯಿಂದ ಪ್ರಖ್ಯಾತಿಯನ್ನು ಹೊಂದಿದ್ದರೆಂದು ಶಾಸನ ಹೇಳದೆ.

**ಜೋಗ ವಟ್ಟಿಗೆ:**

ಧರ್ಮವೆನ್ನುವುದು ಆತ್ಮ-ಪರಮಾತ್ಮರ ವಿಷಯದಲ್ಲಿ ಒಂದು ಜನಸಮೂಹ ತಾಳದ ಇತ್ಯಾತ್ಮಕ ಇಲ್ಲವೆ ನೇತ್ಯಾತ್ಮಕ ಮನೋಧರ್ಮವೆನಿಸಿದೆ. ವೈದಿಕ ಮೊದಲಾದ ಧರ್ಮಗಳು ಪರಮಾತ್ಮನ್ನು ಸಾಕಾರ ರೂಪದಲ್ಲಿ ಮೂರ್ತೀಕರಿಸಿ, ದೇವಾಲಯ ಕಟ್ಟುತ್ತವೆ. ಬೌದ್ಧ, ಜೈನ ಧರ್ಮಗಳು ಪರಮಾತ್ಮನನ್ನು ನಿರಾಕರಿಸಿದರೂ ಜಿನ, ಬುದ್ಧರಂಥ ಮಹಾತ್ಮರನ್ನು ಪರಮಾತ್ಮ ಸ್ಥಾನದಲ್ಲಿ ಗೌರವಿಸಿ, ಅವರ ಹೆಸರಿನಲ್ಲಿ ಸ್ಮಾರಕಗಳನ್ನು ನಿರ್ಮಿಸುತ್ತವೆ. ಪರಮಾತ್ಮನನ್ನು ನಿರಾಕಾರ ರೂಪದಲ್ಲಿ ಸ್ವೀಕರಿಸಿದ ಮತ್ತು ಮಹಾತ್ಮರನ್ನು ಪರಮಾತ್ಮರೆಂದು ಭಾವಿಸಿದ ಕ್ರೈಸ್ತ, ಮುಸಲ್ಮಾನ ಮತ್ತು ವೀರಶೈವಧರ್ಮಗಳು ಸಮೂಹ ಸಂಸ್ಕೃತಿಗಾಗಿ ಚರ್ಚು, ಮಸೀದೆ ಮತ್ತು ಅನುಭವಮಂಟಪಗಳಂಥ, 'ಮಂದಿರ'ಗಳನ್ನು ನಿರ್ಮಿಸುತ್ತವೆ. ಈ ಬಗೆಯ ಧರ್ಮಗಳು ತಮ್ಮನ್ನು ರಕ್ಷಿಸಿಕೊಳ್ಳುವುದರೊಂದಿಗೆ ತಮ್ಮ ವಲಯವನ್ನು ವಿಸ್ತರಿಸಿಕೊಳ್ಳುವಕೆಲಸದಲ್ಲಿಯು ನಿರತವಾಗುತ್ತ ಬಂದಿವೆ. ಸಬಲವಾಗುವಿಕೆಯನ್ನು "ಜೈನೀಕರಣ ಕ್ರಿಯೆ" ಎಂದು ಕರೆದ ಡಾ. ಎಂ. ಎಂ. ಕಲಬುರ್ಗಿಯವರು ದುರ್ಬಲವಾಗುವಿಕೆಯನ್ನು "ಅಜೈನಿಕರಣ ಕ್ರಿಯೆ ಎಂದಿದ್ದಾರೆ."[೨] ಮುಂದುವರೆದು 'ಜೈನ ನಿರ್ಮಾಣಗಳ ನಾಶ ಶೈವರಿಂದ' ಎಂಬ ವಿಷಯವನ್ನು ಪ್ರಸ್ತಾಪಿಸುತ್ತ ತೆರದಾಳ ನೇಮಿತೀರ್ಥಂಕರದ ಬಸದಿಯಲ್ಲಿ ಜೋಗವಟ್ಟಿಗೆ ಇಟ್ಟ ಸಂಗತಿಯತ್ತ ಗಮನ ಸೆಳೆದಿದ್ದಾರೆ. ಈ ನಾಡಿನ ಬಳ್ಳಿಗೇರಿ ಶಾಸನದಲ್ಲಿ[೩] ಲಾಕುಳ ಶೈವರು ಪ್ರಭಾವಶಾಲಿಯಾಗಿದ್ದು, ಜೈನ ಮತ್ತು ಶೈವರಲ್ಲಿ ಮನಸ್ತಾಪವಾಗಿ ಇವರಲ್ಲಿ ಸಂಧಾನಕ್ಕೆ ಬಂದು ಬಳ್ಳಂಗೇರೆಯ (ಬಳಗೇರಿಯ) ಶ್ರೀ ಪಾರ್ಶ್ವತೀರ್ಥ ಕಾಳಿದಾಸ ಜಿನಾಲಯಕ್ಕೆ ಆ ಊರಿನ ಸಮಸ್ತ ಪ್ರಥಮ ಗಣಂಗಳು "ಜೋಗವಟ್ಟಿಗೆಯನಿಕ್ಕಿ ಪಂಚಮಹಾಶಬ್ದ ಮುಮಂ ಸಮ" ಎಂದು ಸ್ಪಷ್ಟಪಡಿಸಿದೆ. ಈ ಜೋಗವಟ್ಟಿಗೆ ಕುರಿತು ಡಾ. ಎಂ. ಎಂ. ಕಲಬುರ್ಗಿ[೪] ಯವರು ದುರ್ಬಲಗೊಳ್ಳುತ್ತ ನಡೆದ ಜೈನಧರ್ಮ, ವೈಷ್ಣವಕ್ಕಿಂತ ಶೈವಕ್ಕೆ ಹೆಚ್ಚು ಶರಣಾಗತವಾದಂತಿದೆ. ಈ ಮಾತಿಗೆ ಸ್ಪಷ್ಟೀಕರಣವೆಂಬಂತೆ ಬಳ್ಳಿಗೇರಿಯ ಶಾಸನದಲ್ಲಿ ರಾಮೇಶ್ವರ ದೇವರ ಸಮಸ್ತ ಪ್ರಥಮಗಣಂಬೆರೆಸು ಜೊಗವಟ್ಟಿಗೆ ಇಟ್ಟಿದ್ದರು

ಎಂದು ಹೇಳಿದೆ. ಇಲ್ಲಿ ಪ್ರಥಮ ಗಣವು ಶೈವಾಗಮವಾಗಿದೆ. ಜೈನರು ತಮ್ಮ ಬಸದಿಗಳನ್ನು ವೈಷ್ಣವರ ವಶಕ್ಕೆ ಒಪ್ಪಿಸುತ್ತಿದ್ದಂತೆ. ಈ ಸಂದರ್ಭದಲ್ಲಿ ಶೈವರ ರಕ್ಷಣೆಗೂ ಒಪ್ಪಿಸಿ ಜೈನರು ಶೈವರಿಂದ ಜೊಗವಟ್ಟಿಗೆ, ನಂದಿಕೋಲುಗಳನ್ನು ಪಡೆದು ತಮ್ಮ ಬಸದಿಯಲ್ಲಿಟ್ಟುಕೊಂಡು ಅವುಗಳಿಗೆ "ಏಕ್ಕೋಟಿ ಜಿನಾಲಯ"ವೆಂದು ತಾವೇ ನಾಮಕರಣ ಮಾಡುತ್ತಿದ್ದರು. ಕೊಲ್ಲಾಪುರದ ರೂಪನಾರಾಯಣ ಬಸದಿಗೆ ಪ್ರತಿಬದ್ಧವಾಗಿದ್ದ ಕ್ರಿ. ಶ. ೧೧೮೧ರ ತೇರಿದಾಳ ನೇಮಿತೀರ್ಥಂಕರ ಬಸದಿಯನ್ನು ಅದೆ ಗ್ರಾಮದ ಶೈವ ಕಲಿದೇವರ ದೇವಾಲಯಕ್ಕೆ ಪ್ರತಿಬದ್ಧ ಮಾಡುವಾಗ "ಇಗ್ಗಳಯ ಜೋಗವಟ್ಟಿಗೆ ಸ್ಥಳವೆಂದು ಹೆಸರಿಸಿ, ಬಸದಿಯಲ್ಲಿ ಜೋಗವಟ್ಟಿಗೆಯನ್ನು ಇಟ್ಟರೆಂದೂ ಬಸದಿಯ ಮೇಲೆ ಶೂದ್ರಕ, ಸಿಂಹ, ಛತ್ರ, ಈ ಚಿಹ್ನೆಗಳನ್ನು ಸ್ಥಾಪಿಸಿದ್ದರೆಂದು, ಈ ದೇವರಿಗೆ ತ್ರಿಶೂಲದ ಘಂಟೆ, ಪರೆಗಳ ಮರ್ಯಾದೆಯಿದೆಯೆಂದು ನಿರ್ಣಯಿಸಿದ ಸಂಗತಿ ಈ ಶಾಸನ ತಿಳಿಸುತ್ತದೆ. ಕ್ರಿ. ಶ. ೧೧೭೫ರ ಕುಪ್ಪಟುರು ಶಾಸನ ಜಿನಾಲಯ ಬ್ರಾಹ್ಮಣರೊಂದಿಗಿನ ಒಪ್ಪಂದ ಸೂಚಕವಾಗಿ "ಬ್ರಹ್ಮ ಜಿನಾಲಯ"ವೆಂದು ಕರೆಯಿಸಿಕೊಳ್ಳುತ್ತ, ಶೈವರೊಂದಿಗೆ ಒಪ್ಪಂದ ಸೂತ್ರವಾಗಿ ಜೋಗವಟ್ಟಿಗೆಯನ್ನು ಇಟ್ಟುಕೊಂಡ ವಿಷಯ ಅಲ್ಲಿಯ ಶಾನದಲ್ಲಿದೆ."[೬೫] ಅಥಣಿ ತಾಲೂಕಿನ ಬಳ್ಳಿಗೇರಿ ಶಾಸನ[೬೬] ಪಂಚಮಹಾಶಬ್ದಮುಮಂ ಎಂದು ಹೇಳಿರುವುದರಿಂದ ಮೇಲೆ ಹೇಳಿದ ಶೂದ್ರಕ, ಸಿಂಹ, ಛತ್ರ, ದೇವರ ತ್ರಿಶೂಲದ ಘಂಟೆ ಪರೆಗಳ ಮರ್ಯಾದೆ ಇವು 'ಪಂಚಮಹಾಶಬ್ದ' ವಾದ್ಯಗಳಾಗಿರಬೇಕು. ಡಾ. ಎಂ. ಎಂ. ಕಲಬುರ್ಗಿಯವರು ಈ ಸಂಪ್ರದಾಯ ಕ್ರಿ. ಶ. ೧೧೦೪ ರಿಂದ ೧೩ನೇ ಶತಮಾನದವರೆಗೂ, ವಿಜಾಪೂರ ಜಿಲ್ಲೆಯಿಂದ ದಕ್ಷಿಣ ಕನ್ನಡ ಜಿಲ್ಲೆ, ಶಿವಮೊಗ್ಗ ಜಿಲ್ಲೆ, ಹಾಸನ ಜಿಲ್ಲೆ, ತುಮಕೂರು ಜಿಲ್ಲೆ, ಮಂಡ್ಯ ಜಿಲ್ಲೆಗಳವರೆಗೂ ವ್ಯಾಪಿಸಿದ್ದಾತೆಂದು ಹೇಳಿದ್ದಾರೆ. ಆದರೆ ಈ ಸಂಪ್ರದಾಯ ಬೆಳಗಾಂವ ಜಿಲ್ಲೆಯವರೆಗೂ ವ್ಯಾಪಿಸಿತೆಂದು ಬಳ್ಳಿಗೇರಿ ಶಾಸನದಿಂದ ಸ್ಪಷ್ಟವಾಗುತ್ತದೆ.

**ವೈಷ್ಣವ ಧರ್ಮ:**

ಕನ್ನಡದಲ್ಲಿ ಲಭ್ಯವಾಗಿರುವ ಅತ್ಯಂತ ಪ್ರಾಚೀನವಾದ ಹಲ್ಮಿಡಿ ಶಾಸನ ವಿಷ್ಣು ಪ್ರಾರ್ಥನೆಯೊಂದಿಗೆ ಪ್ರಾರಂಭವಾಗುತ್ತದೆ. ಆದ್ದರಿಂದ ಈ ಶಾಸನದ ಕಾಲ ಕ್ರಿ. ಶ. ೪೫೦ಕ್ಕಿಂತ ಪೂರ್ವದಿಂದಲೂ ವೈಷ್ಣವಧರ್ಮ ಕರ್ನಾಟಕದಲ್ಲಿ ಪ್ರಚಲಿತವಿದ್ದತೆಂದು ನಂಬಬಹುದಾಗಿದೆ. ಬಾದಾಮಿ ಚಾಲುಕ್ಯ ಅರಸು ಮಂಗಳೇಶ ತನ್ನನ್ನು ಮಹಾಭಾಗವತ ಎಂದು ಹೇಳಿಕೊಂಡು, ಬಾದಾಮಿಯಲ್ಲಿ ವೈಷ್ಣವ ಗುಹಾಲಯ ಕಟ್ಟಿಸಿರುವ ಸಂಗತಿ ತುಂಬ ಪ್ರಸಿದ್ಧವಾಗಿದೆ. ವೈಷ್ಣವ ಧರ್ಮದ ಬ್ರಾಹ್ಮಣರು ಅಗ್ರಹಾರದ ಮಹಾಜನರೆಸಿ ಅಲ್ಲಿನ ಆಡಳಿತ ನೋಡಿಕೊಳ್ಳುವುದರೊಂದಿಗೆ ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ ಪ್ರತಿಗ್ರಹ ಮೊದಲಾದ ಷಟ್ಕರ್ಮಗಳಲ್ಲಿ ನಿರತರಾಗಿತ್ತಿದ್ದರು.[೬೭] ಪ್ರಾಚೀನ ಸಮಾಜ ವ್ಯವಸ್ಥೆಯಲ್ಲಿ ವರ್ಣಾಶ್ರಮ ಧರ್ಮವನ್ನು ಚಾಚೂ ತಪ್ಪದೆ ಅನುಸರಿಸಿಕೊಂಡು ಬಂದ ಇವರು

ರಾಜಕೀಯ ವ್ಯವಸ್ಥೆಯಲ್ಲಿ ಪ್ರಮುಖಸ್ಥಾನ ವಹಿಸಿದ್ದರು. ಅಥಣಿ ನಾಡಿನಲ್ಲಿ ಸುಮಾರು ೧೧ ವೈಷ್ಣವ ದೇವಾಲಯಗಳಿವೆ. ಕೊಕಟನೂರು ಶಾಸನವು ಕಣಂಬಡೆ ಮೂನ್ನೂರನ್ನು ಆಳುತ್ತಿದ್ದ ಸಮಯದಲ್ಲಿ ಕೊಕಟನೂರು[೯೮] ಅಗ್ರಹಾರದ ಶ್ರೀ ಭಾವಸುದ್ಧ ದೇವರಿಗೆ ಉತ್ತರಾಯಣ ಸಂಕ್ರಾಂತಿ ಹಬ್ಬದ ನಿಮಿತ್ಯ ಮಹಾಪ್ರಭು ಪಾರ್ವರ ಬಲ್ಲದ ದತ್ತಿ ನೀಡಿದ್ದನ್ನು ಹೇಳಿದೆ.

ತುಂಗಳದ ಶಾಸನವು ಕಣಂಬಡೆ ನಾಡಿನ ಅಧಿಕಾರಿ ಚಿದ್ದರಸ ದಂಡನಾಯಕ ಪ್ರಮುಖ ಶ್ರೀಕರಣಗಳು ಮತ್ತು ತುಂಗಳ ಅಗ್ರಹಾರದ ಚೌಡಭಟ್ಟೋಪಾಧ್ಯಾಯರು ಸೇರಿ ಚನ್ನಕೇಶವ ದೇವರ ಗಂಧ, ಧೂಪ, ಖಂಡಸ್ಫುಟಿತ ಜಿರ್ಣೋದ್ಧಾರಕ್ಕಾಗಿ ದಾನ ನೀಡಿದ್ದನ್ನು ಸ್ಪಷ್ಟಪಡಿಸಿದೆ. ಚಾಲುಕ್ಯ ಸೋಮೇಶ್ವರ ನಾಲ್ಕನೇ ಮಂತ್ರಿ ಚಮುಪತಿ ಸೋಮನು ಸತ್ತಿ ಅಗ್ರಹಾರದ ನರಸಿಂಹದೇವರಿಗೆ ಅಥಣಿ ತಾಲೂಕಿನ ಕೊಡಗನೂರು ಹಳ್ಳಿಯನ್ನು ದತ್ತಿ ಬಿಟ್ಟದ್ದನ್ನು ಮುರಗುಂಡಿ ಶಾಸನ ಪ್ರಸ್ತಾಪಿಸಿದೆ.[೯೯] ಬಳ್ಳಿಗೇರಿ[೧೦೦] ಶಾಸನವು ನರಸಿಂಹ ದೇವರ ಸ್ತುತಿಯೊಂದಿಗೆ ಪ್ರಾರಂಭವಾಗಿದೆ. ಶಾಸನದಲ್ಲಿ ಅಹವಮಲ್ಲನು ವಿಷ್ಣುವಿನ ಭಕ್ತನಾಗಿದ್ದನೆಂದು ನಿರೂಪಿಸಿದೆ. ಬಾಡಗಿ ಶಾಸನವು[೧೦೧] ತುಂಗಳ ಮತ್ತು ಬಾಡಗಿಯ ಪ್ರಭುತ್ವವನ್ನು ಅನುಭವಿಸುತ್ತಿದ್ದಾಗ ಮೈಲುಗಿದೇವನ ಅನುಮತದಿಂದ ಶ್ರೀಲಕ್ಷ್ಮಣೇಶ್ವರ ದೇವರಿಗೆ ಭೂಮಿಯನ್ನು ಮತ್ತು ನೈವೇಧ್ಯಕ್ಕೆ ಗದ್ದೆಯನ್ನು ಬಿಟ್ಟದ್ದನ್ನು ಹೇಳಿದೆ. ವಿಶ್ವಾಮಿತ್ರಗೋತ್ರದ ಪವಿತ್ರ ಚೂಡಾಮಣಿ ಮಂಕಣ ಭಟ್ಟೋಪಾಧ್ಯಾಯರು ಲಕ್ಷ್ಮಣೇಶ್ವರ ದೇವರ ಆಚಾರ್ಯರಾಗಿದ್ದನ್ನು ಸ್ಪಷ್ಟಪಡಿಸುತ್ತದೆ.

ಕಾಳಾಮುಖ ಶೈವ – ವೀರಶೈವ:

ಶೈವ ಧರ್ಮವು ಅತಿ ಪುರಾತನವಾದುದು. ಇದರಲ್ಲಿ ಅನೇಕ ಭೇದಗಳಿರುವುದನ್ನು ಪ್ರಾಚೀನ ದರ್ಶನ ಶಾಸ್ತ್ರಕಾರರು ಗುರುತಿಸಿದ್ದಾರೆ. ವಾಚಸ್ಪತಿ ಮಿಶ್ರರು, ಮಹೇಶ್ವರರನ್ನು ನಾಲ್ಕು ಪಂಗಡವಾಗಿ ವಿಂಗಡಿಸುತ್ತಾರೆ. ಅವು ಶೈವ, ಪಾಶುಪತ, ಕಾಪಾಲಿಕ ಹಾಗೂ ಕಾರುಣಿಕ ರಾಮಾನುಜರ ಗುರುಗಳಾದ ಯಮುನಾಚಾರ್ಯರು ತಮ್ಮ 'ಆಗಮ ಪ್ರಾಮಾಣ್ಯ ಹೆಸರಿನ ಗ್ರಂಥದಲ್ಲಿ ಶೈವರು, ಪಾಶುಪತರು, ಕಾಪಾಲಿಕರು ಹಾಗೂ ಕಾಳಾಮುಖರನ್ನೆಲ್ಲ ಸೇರಿಸಿಯೇ ಪಟ್ಟಿಮಾಡಿದ್ದಾರೆ.[೧೦೨] ಪಾಶು ಪತ ಶಾಖೆಯ ಸ್ಥಾಪಕನಾದ ಲಕುಲೀಶನು ವಾಯುಪುರಾಣ, ಶಿವಪುರಾಣ, ಲಿಂಗಪುರಾಣ ಮತ್ತು ಸೂತ ಸಂಹಿತೆಗಳಲ್ಲಿ ಉಕ್ತನಾಗಿದ್ದು ಅವನು ರುದ್ರನ ಒಂದು ಅವತಾರವಾಗಿ, ಗುಜರಾತಿನ ಕಾಯಾರೋಹಣದಲ್ಲಿ ಹುಟ್ಟಿದವನೆಂದು ತಿಳಿದುಬರುತ್ತದೆ.[೧೦೪] ಲಕುಲೀಶ–ಪಾಶುಪತ ಮತ್ತು ಕಾಳಾಮುಖಗಳೆರಡು ಒಂದೇ. ಅವು ಶೈವ ಧರ್ಮಕ್ಕೆ ಇರುವ ಇನ್ನೆರಡು ಹೆಸರುಗಳು. ಪಾಶುಪತ, ಕಾಳಾಮುಖ, ಕಾಪಾಲಿಕರಲ್ಲಿ ಪಾಶುಪತ ಕಾಳಾಮುಕರು ತಮ್ಮ ಸಾತ್ವಿಕ ಆಚರಣೆಗಳಿಂದ ಒಂದೇ ಗುಂಪಿಗೆ ಸೇರುತ್ತಾರೆ. ಮುಖದ ಮೇಲೆ ಕಪ್ಪು ಗೆರೆಗಳನ್ನು (ಭಸ್ಮವನ್ನು) ಹಚ್ಚಿಕೊಳ್ಳುವ ಮೂಲಕ ಕಾಳಾಮುಖ (ಅಸಿತವಕ್ತ್ರ) ರೆನ್ನಿಸಿಕೊಂಡಿರಬಹುದಾದ ಇವರಿಗೂ ದಿನದಲ್ಲಿ ಮೂರು ವೇಳೆ

ಭಸ್ಮ ಸ್ನಾನ ಮಾಡಬೇಕೆನ್ನುವ ಪಾಶುಪತರಿಗೂ ಯಾವುದೇ ವ್ಯತ್ಯಾಸವಿದ್ದಂತಿಲ್ಲ. ಕನ್ನಡ ಶಾಸನಗಳು ಎಲ್ಲಿಯೂ ಇವರಿಬ್ಬರು ಬೇರೆ ಬೇರೆ ಎಂದು ಸ್ಪಷ್ಟವಾಗಿ ಹೇಳಿಲ್ಲ.[೧೦೫] ಹನ್ನೊಂದನೆಯ ಶತಮಾನ ಕಲ್ಯಾಣ ಚಾಲುಕ್ಯರು ವೈಭವದಿಂದ ರಾಜ್ಯಭಾರ ಮಾಡುತ್ತಿರುವ ಕಾಲ. ಈ ಅವಧಿಯಲ್ಲಿ ಜೈನಧರ್ಮ ತನ್ನ ಗತವೈಭವದ ಕನಸಿನಿಂದ ಎಚ್ಚೆತ್ತು ತಾಂತ್ರಿಕ ಆಚರಣೆಗಳ ಮೂಲಕ ಜನಪ್ರಿಯತೆ ಗಳಿಸುವ ಹವಣಿಕೆಯಲ್ಲಿತ್ತು. ಕರ್ನಾಟಕದ ದಕ್ಷಿಣ ಹಾಗೂ ದಕ್ಷಿಣ ಪೂರ್ವ ಭಾಗಗಳಲ್ಲಿ ಪ್ರಗಲ್ಭ ಸ್ಥಿತಿಯಲ್ಲಿದ್ದ ವೈಷ್ಣವಧರ್ಮ ಉತ್ತರ ಭಾಗದ ಶೈವರೊಂದಿಗೆ ಹೊಂದಾಣಿಕೆ ಮತ್ತು ಅನುಸಂಧಾನ ನಡೆಸಿತ್ತು. ಈ ಸಮಯದಲ್ಲಿ ಸಾಮಾನ್ಯರೊಂದಿಗಿನ ನಿಕಟ ಸಂಬಂಧ ಮತ್ತು ರಾಜಕೀಯ ಪೋಷಣೆಯ ದೃಷ್ಟಿಯಿಂದ ಹೆಚ್ಚಿನ ಗೌರವ ಪಡೆದ ಕಾಳಾಮುಖ ಪಾಶುಪತರು ತಮ್ಮ ಸ್ಥಾನ ಭದ್ರ ಪಡಿಸಿಕೊಂಡಿದ್ದರು. ಮುಂದೆ ಆಳ್ವಕೆ ವಹಿಸಿದ ಕಲಚೂರಿ ಮತ್ತು ಯಾದವ ಅರಸುಮನೆತನಗಳ ಕಾಲಕ್ಕೂ ಆ ಸ್ಥಾನ ಸಡಿಲಗೊಳ್ಳಲಿಲ್ಲವೆಂಬುದು ಈ ನಾಡಿನ ಶಾಸನಗಳ ಅಧ್ಯಯನದಿಂದ ಸ್ಪಷ್ಟವಾಗುತ್ತದೆ.

ಈ ನಾಡಿನಲ್ಲಿ ಆಳ್ವಿಕೆ ಮಾಡಿದ ಅರಸರು, ಸಾಮಂತರು, ಮಹಾಮಂಡಳೇಶ್ವರರು, ಪ್ರಭುಗಳು ಮತ್ತು ಮಹಾಜನರು, ವರ್ತಕರು, ಸಾಮಾನ್ಯ ಜನರು ಇಲ್ಲಿನ ಶೈವ ದೇವಾಲಯಗಳ ಪೂಜೆ, ಪುರಸ್ಕಾರ, ದೇವರ ಅಂಗಭೋಗ – ರಂಗಭೋಗ, ಖಂಡಸ್ಫುಟಿತ ಜೀರ್ಣೋದ್ಧಾರ, ತಪೋಧನ ವಿದ್ಯಾರ್ಥಿಗಳ ಆಹಾರ, ಬ್ರಾಹ್ಮಣರ ಸತ್ರಕ್ಕೆ ದಾನ ನೀಡಿದ ಕುರಿತು ಅನೇಕ ಉಲ್ಲೇಖಗಳು ಶಾಸನಗಳಲ್ಲಿ ಬಂದಿವೆ. ಕಲ್ಯಾಣ ಚಾಲುಕ್ಯ ಆರನೇ ವಿಕ್ರಮಾದಿತ್ಯನು ಕಲ್ಯಾಣದ ನೆಲೆವೀಡಿನಲ್ಲಿ ರಾಜ್ಯಭಾರಮಾಡುತ್ತಿದ್ದಾಗ ಕರಹಡ ನಾಲ್ಸಾಸಿರ ಮತ್ತು ಮಿರಿಂಜೆ ಮೂರು ನೂರು ಪದರದೇಶಗಳನ್ನು ಆಳುತ್ತಿದ್ದ ಮಹಾಮಂಡಳೇಶ್ವರ ಜೋಗಪಯ್ಯರಸ ಮತ್ತು ಆತನ ಅರಸಿ ಪೊಲ್ಲಿಕಬ್ಬೆಯರು ಕೊಕಟನೂರಿನಲ್ಲಿ ಕೂಚಿಸೆಟ್ಟಿ ಮಾಡಿಸಿದ ತ್ರೈಪುರುಷ ದೇವಾಲಯಕ್ಕೆ ಜನ್ನವಾಡ ಗ್ರಾಮವನ್ನು ದತ್ತಿಬಿಟ್ಟುಕೊಟ್ಟಿರುವ ಸಂಗತಿ ಶಾಸನವೊಂದರಲ್ಲಿದೆ[೧೦೬] ರಾಮತೀರ್ಥ ಶಾಸನವು[೧೦೭] ತ್ರಿಭುವನಮಲ್ಲದೇವನ ಪಟ್ಟಮಹಾದೇವಿಯ ಮಗ ಯುವರಾಜ ಮಲ್ಲಿಕಾರ್ಜುನದೇವರು ಕರಹಡ ನಾಲ್ಸಾಸಿರವನ್ನು ಆಳ್ವಿಕೆ ಮಾಡುತ್ತಿದ್ದಾಗ ಶ್ರೀಮನ್ಮಹಾಮಂಡಳೇಶ್ವರ ಪೆರ್ಮಾರ್ಮಡಿಯು ಸ್ವಯಂಭು ರಾಮೇಶ್ವರ ದೇವರ ಸ್ಥಾನಾಚಾರ್ಯ ಶಿವಸಕ್ತಿ ಪಂಡಿತರಿಗೆ ದತ್ತಿ ಬಿಟ್ಟಿದ್ದನ್ನು ಹೇಳಿದೆ.

ಲಾಕುಳ ಪಾಶುಪತ ಕಾಳಾಮುಖ ಧರ್ಮವನ್ನು ಶಿವಮಯ ಶಿವಧರ್ಮ ಎಂದು ಕರೆದಿರುವುದು ಕಣಂಬಡೆ ನಾಡಿನ ಶಾಸನಗಳಲ್ಲದೆ. ತೆಲಸಂಗದ ಶಾಸನವು[೧೦೮] ಅಗ್ರಹಾರದ ಮಹಾಜನಂಗಳು ಉತ್ತರಾಯಣ ಸಂಕ್ರಾಂತಿಯ ನಿಮಿತ್ಯವಾಗಿ ರೇವಣೇಶ್ವರ ದೇವರ ರಂಗಭೋಗ, ಖಂಡಸ್ಫುಟಿತ ಜೀರ್ಣೋದ್ಧಾರಕ್ಕಾಗಿ ದತ್ತಿ ಬಿಟ್ಟಿದ್ದನ್ನು ಸ್ಪಷ್ಟಪಡಿಸಿದೆ. ಕಣಂಬಡೆ ನಾಡಿನ 'ಮತ್ತೊಂದು ತೆಲಸಂಗ ಶಾಸನವು'[೧೦೯] ಉದಾತ್ತ ಸದ್ಗುಣವುಳ್ಳ, ಸದಾಚಾರ ಸಂಪನ್ನರಾದ, ಅಶರೀರಿತ ರಕ್ಷಣದ ಶಿವಭಕ್ತರಿದ್ದರೆಂದು ತಿಳಿಸಿದರೆ, ಕೊಕಟನೂರು

ಶಾಸನವು[೧೧೦] 'ಶೈವಮಾರ್ಗ' ಕುರಿತು ವಿವರಿಸಿದೆ. ಯಾದವ ಸಿಂಘಣನ ಕಾಲದಲ್ಲಿ ಶೈವಧರ್ಮ ತನ್ನ ಮಹತ್ವವನ್ನು ಕಳೆದುಕೊಂಡಿರಲಿಲ್ಲ ಎಂಬುದಕ್ಕೆ ಇದು ನಿದರ್ಶನವಾಗಿದೆ. ಅಥಣಿ ತಾಲೂಕಿನ ಕೊಕಟನೂರು ಅಗ್ರಹಾರದಲ್ಲಿ ಚಂದಿನಾಥನ ಭಕ್ತನಾಗಿದ್ದ ಭಾಯಿದೇವನು "ಒಂದು ತಿಂಗಳು ಸದ್ಭಕ್ತಿ ಸಂಗದ ಗೋಷ್ಠಿಯೊಳದ್ದು, ಮತ್ತೆರಡು ತಿಂಗಳು ತನ್ನನೇಕ ಭಾವದಿಂದ ಇದ್ದು, ಮೂರನೆಯ ತಿಂಗಳು ಭಾಯ್ಯ ಡಂಗುರ ಹೊಯಿಸುತ ಸುರಲೋಕವ ಮುತ್ತಿದ ಎಂದಿದೆ. ಮೂರು ಕಂಗಳಲು ಅಷ್ಟವಿಧಾರ್ಚನೆ ನೇಮಂ ನಿಷ್ಠೆಯ ಲಿಂಗಾನುಪ್ರೇಮ, ಭಯ ಭಕ್ತಿ, ಚಲಂ, ಸೃಷ್ಟಿ ಗತಿ, ಹೊಸತು. ಶಿವಪಥ, ದೃಷ್ಟಾಂತಂ ಕಂಡು ಭಾಯ್ಯ ಲಿಂಗನುಗೊಂಡಂ" ಎಂದು ಹೇಳಿರುವ ಶಿವಪಥವು ಶೈವ ಮಾರ್ಗವಾಗಿದೆ. ನೇಮ, ಲಿಂಗಾನು ಪ್ರೇಮ, ಭಯಭಕ್ತಿ ಮುಂತಾದ ಪದಗಳಿಂದ ಆತ ಪರಮೇಶ್ವರನಲ್ಲಿ ಉತ್ಕಟವಾದ ಭಕ್ತಿ ಹೊಂದಿದ್ದ ಎನ್ನುವುದು ಸ್ಪಷ್ಟವಾಗುತ್ತದೆ.ಇದೇ ಶಾಸನದ ೨೬ನೆಯ ಸಾಲಿನಿಂದ ೩೧ನೆಯ ಸಾಲಿನವರೆಗೆ 'ಶಿವಗಣದ' ವರ್ಣನೆಯಿದೆ. ಶಿವಗಣಗಳಲ್ಲಿ ಕೆಲವರು ಅಣುವಿಗಿಂತಲೂ ಕಿರಿಯರು ಕೆಲವರು ರಜತಾದ್ರಿಗಿಂತ ದೊಡ್ಡವರಾಗಿ ಬೆಳೆದವರು. ಕೆಲವರು ಕಾಮನಂತೆ ಸುಂದರರು, ಕೆಲವರು ಅಂಜಿಕೆಯನ್ನುಂಟುಮಾಡುವ ಕರಾಳರೂಪಧಾರಿಗಳಾಗಿದ್ದರು. ಕೆಲವರು ಸೌಮ್ಯ ರೂಪಧಾರಿಗಳಾಗಿ ದಯಾಪರರು, ಕೆಲವರು ಇಂದ್ರಿಯನಿಗ್ರಹಿಗಳಾಗಿದ್ದರೆ ಕೆಲವರೂ ರತಿಲೋಲರು. ಈ ಗಣೇಶ್ವರರಲ್ಲಿ ಅಜಾಂಡಕೋಟಿಗಳನ್ನು ಹುಟ್ಟಿಸುವ ಸಾಮರ್ಥ್ಯವೂ ನಿಮಿಷಾರ್ಧದಲ್ಲಿ ಅವುಗಳನ್ನೆಲ್ಲ ನಾಶಗೊಳಿಸುವ ಸಾಮರ್ಥ್ಯವುಳ್ಳವರು ಎಂದು ಹೇಳಿದೆ. ಭಾಯಿ ದೇವನನ್ನು ಶಾಸನ "ಸ್ಥಾವರಜಂಗಮಂ ದ್ವಿವಿಧಲಿಂಗಮುಂ" ಎಂದಿದೆ. ಬಹುಶಃ ಈತ ಶೈವ ಬ್ರಾಹ್ಮಣನಾಗಿರಬೇನಿಸುತ್ತದೆ. ಇದೆ ಶಾಸನದಲ್ಲಿ ಭಾಯಿದೇವನ ಶಿಷ್ಯ ಮಲ್ಲಿದೇವನನ್ನು, ಶಿವೈಕ್ಯನು, ವಿಪ್ರರಾಜ ಪ್ರಭುಗಣಾಗ್ರಣಿ ಕುಲದೀಪಕನು, ಪಾರ್ಬರ ಬಲ್ಲಹ (ಬ್ರಾಹ್ಮಣ ಶ್ರೇಷ್ಠ) ಎಂದು ಸಂಭೋಧಿಸಿರುವುದರಿಂದ ಈತನೂ ಶಿವಾಗಮಾನುಯಾಯಿ ಬ್ರಾಹ್ಮಣನಾಗಿರಬೇಕು. ಪಾಶುಪತ ಶೈವರ ಮುಖ್ಯ ಕೊಡುಗೆಯೆಂದರೆ ದೇವಾಲಯ ಮತ್ತು ಮಠ ನಿರ್ಮಾಣ, ದೇವಾಲಯವನ್ನು ಕಟ್ಟಿಸಿ ತಮ್ಮ ಹೆಸರಿನಲ್ಲಿ ಲಿಂಗವನ್ನು ಸ್ಥಾಪಿಸಿದವರು ದೇವರೇ ಆಗುತ್ತಾರೆಂಬ ಆಗಮವಾಕ್ಯದ ಮೇರೆಗೆ ಆ ಕಾಲದಲ್ಲಿ ಅನೇಕರು ತಮ್ಮ ಮತ್ತು ತಮ್ಮ ಪರಿವಾರದವರ ಹೆಸರಿನಲ್ಲಿ ದೇವಾಲಯಗಳನ್ನು ಕಟ್ಟಿಸುತ್ತಿದ್ದರು.[೧೧೧] ಉಮ್ರಾಣಿ ಶಾಸನವು ಮಹಾಮಂಡಳೇಶ್ವರ ಹೆಮ್ಮಾಡಿ ಅರಸನು ಉಂಬರವಾಣಿಯಲ್ಲಿ ಹೆಮ್ಮೇಶ್ವರ ದೇವಾಲಯ, ಪತ್ನಿ ಚಂದಲದೇವಿಯ ಹೆಸರಿನಲ್ಲಿ ಚಂದಲೇಶ್ವರ ದೇವಾಲಯ ಕಟ್ಟಿಸಿದ ಸಂಗತಿ ಹೇಳಿದೆ.

ಅಥಣಿ ತಾಲೂಕು ಜತ್ತ ತಾಲೂಕಿನಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಶೈವ ದೇವಾಲಯಗಳಿರುವದು ಶಾಸನಗಳಿಂದ ಸ್ಪಷ್ಟವಾಗುತ್ತದೆ. ಇವು ಪಾಶುಪತ ಕಾಳಾಮುಖರ ಪ್ರಮುಖ ನೆಲೆಗಳಾಗಿದ್ದವು. ಈ ದೇವಾಲಯಗಳಲ್ಲಿ ವಾಸವಾಗಿದ್ದ ಪಾಶುಪಾತ ಕಾಳಾಮುಕ

ಯತಿಗಳು ಸ್ಥಾನಾಚಾರ್ಯರು. ಇವರು ಯಮನಿಯಮ ಸ್ವಾಧ್ಯಾಯ ಧ್ಯಾನ ಧಾರಣ ಮೋನಾನುಷಠಾನ ಜಪಸಮಾಧಿ ಸಂಪನ್ನರಾಗಿದ್ದುಕೊಂಡು, ನೈಷ್ಠಿಕ ಬ್ರಹ್ಮಚಾರಿಗಳಾಗಿ ದೇವಾಲಯದ ಮತ್ತು ಮಠದ ಆಡಳಿತವನ್ನು ನೋಡಿಕೊಳ್ಳುತ್ತಿದ್ದರು. ಉಮ್ರಾಣಿ ಶಾಸನವು[೧೧೨] ಚಂದ್ರಾಭರಣ ಪಂಡಿತನನ್ನು ದೀನನಾಥ ಪೋಷಣ ದುರಿತ ಗಜಮದ ನಿವಾರಣ. ಪಂಡಿತ ಚೂಡಾಮಣಿ. ಶಿಷ್ಟಜನ ಚಿಂತಾಮಣಿ ಎಂದು ವರ್ಣಿಸಿದೆ.

ಕಾಳಾಮುಖ ಪಾಶುಪತ ಶೈವ ಧರ್ಮದ ಆಚಾರ್ಯರ ಹೆಸರಿನ ಮುಂದೆ, ರಾಶಿ, ಪಂಡಿತ, ಜೀಯ, ಶಕ್ತಿಯೆಂಬ ಉತ್ತರ ಪದಗಳು ಬಳಕೆಯಾಗುತ್ತದ್ದವು. ಶಿವಸಕ್ತಿ ಪಂಡಿತ[೧೧೩] ಲೋಕಾಭರಣ ಪಂಡಿತ[೧೧೪] ಚಂದ್ರಾಭರಣ ಪಂಡಿತದೇವ[೧೧೫] ವಿದ್ಯಾರಾಶಿ ಪಂಡಿತ[೧೧೬] ಸ್ಥಾನಾಚಾರ್ಯರು ವಿದ್ಯಾಪ್ರೇಮಿಗಳಾಗಿದ್ದು ದೇವಸ್ಥಾನ ಮಠಗಳಲ್ಲಿನ ತಪೋಧನರು ಮತ್ತು ವಿದ್ಯಾರ್ಥಿಗಳಿಗೆ ವಿದ್ಯಾದಾನದ ಏರ್ಪಾಟು ಮಾಡಿದ್ದಾರೆ. ಜೊತೆಗೆ ದೇವಾಲಯ ಕಟ್ಟಿಸುವುದು, ದಾನದತ್ತಿಗಳನ್ನು ಸ್ವೀಕರಿಸುವುದು, ಬೀಡುವುದು, ಸಂರಕ್ಷಿಸಿಕೊಂಡು ಬರುವುದು ಅಪರ ಪ್ರಧಾನ ಕಾರ್ಯಗಳಾಗಿದ್ದವು.

**ಸಾಹಿತ್ಯ:**

ಸಾಹಿತ್ಯದ ದೃಷ್ಠಿಯಿಂದಲೂ ಶಾಸನಗಳು ಅಪೂರ್ವವಾದ ದಾಖಲೆಗಳಾಗಿವೆ. ಈ ನಾಡಿನ ಬಹುಪಾಲು ಶಾಸನಗಳು ದಾನಶಾಸನಗಳಾಗಿವೆ. ಶಾಸನದ ಭಾಷೆ ಯಾವುದೇ ಇರಲಿ, ಪ್ರಾರಂಭದಲ್ಲಿ ಸ್ತುತಿ ಪದ್ಯ, ಅಂತ್ಯದಲ್ಲಿ ಫಲಶೃತಿಪದ್ಯ ಸಾಮಾನ್ಯವಾಗಿ ಸಂಸ್ಕೃತ. ಅದರಲ್ಲಯೂ 'ನಮಸ್ತುಂಗ ಶಿರಶ್ಚುಂಬಿ' ಎಂಬ ಸ್ತುತಿ ಪದ್ಯ, 'ಸ್ವದತ್ತಂ ಪರದತ್ತಂ' ಎಂಬ ಫಲಶೃತಿ ವಾಕ್ಯಗಳು ಸಾಮಾನ್ಯವಾಗಿ ಸಂಸ್ಕೃತದಲ್ಲಿರುತ್ತವೆ. ಕೆಲವೊಮ್ಮೆ ವಿರಳವಾಗಿ ಕನ್ನಡ ಬಾಷೆಯಲ್ಲಿರುವ ಸ್ತುತಿ ಪದ್ಯ-ಫಲಶೃತಿ ವಾಕ್ಯಗಳು ಕಾಣಸಿಗುತ್ತವೆ. ಪಾರಂಪಾರಿಕ ಬಿರುದುಗಳು ಮತ್ತು ದಾನ ಕೊಟ್ಟ ವಿವರಣೆ ಗದ್ಯದಲ್ಲಿದ್ದರೆ, ದೇಶ ವರ್ಣನೆ, ಪುರವರ್ಣನೆ , ರಾಜ ಮತ್ತು ಮಂಡಳೇಶ್ವರ ಗುಣಗಾನ, ದಾನ ಕೊಡುವವನ ಉದಾರ ಮನೋಭಾವ ಹಾಗೂ ಸ್ವೀಕರಿಸುವ ಅರ್ಹತೆ ಮುಂತಾದ ವಿಷಯಗಳು ನಿರೂಪಣೆ ಶಾಸನ ಪದ್ಯಗಳಲ್ಲಿದ್ದು, ಕಲಿಕಲ್ಪನೆಗೆ ಹಿಡಿದ ಕನ್ನಡಿಯಾಗಿದೆ. ರಾಜ, ಸಾಮಂತ, ಅಧಿಕಾರಿ, ಸಾಮಾನ್ಯ ಜನರು ಯಾರೇ ಇದ್ದರೂ ಅವರಲ್ಲಿ ಅತ್ಯುನ್ನವಾದ ಆದರ್ಶಗುಣಗಳನ್ನು ಹೇಳಿರುವುದರಿಂದ ಇಲ್ಲಿನ ವರ್ಣನೆಗಳು ಕೆಲವೊಮ್ಮೆ ಅತಿಶಯೋಕ್ತಿ ಮತ್ತು ಉತ್ಪ್ರೇಕ್ಷೆಗಳಾಗಿ ಕಂಡು ಬರುತ್ತದೆ.

**ಶಾಸನ ಸಾಹಿತ್ಯ:**

ಶಾಸನದಲ್ಲಿ ವಿವಿಧ ಸಾಹಿತ್ಯ ರೂಪಗಳು, ಛಂದಸ್ಸಿನ ಪ್ರಕಾರಗಳು ಕಂಡು ಬರುತ್ತವೆ. "ವಾಸ್ತವ ಸಂಗತಿಯೇನೆಂದರೆ ಪಕ್ಕಾ ಸಾಹಿತ್ಯವು ಶಾಸನ ಸಾಹಿತ್ಯಕ್ಕೆ ಆದರ್ಶ ಮತ್ತು ಪ್ರಚೋದಕ. ಪಕ್ಕಾ ಸಾಹಿತ್ಯದ ಏಳು ಬೀಳುಗಳನ್ನು ಶಾಸನ ಸಾಹಿತ್ಯವು ಅನುಸರಿಸಿದರೆ.

ಪಂಪ, ರನ್ನ ಮೊದಲಾದ ಚಂಪುಕವಿಗಳ ಅನಂತರ ಕಾವ್ಯಮಯ ಶಾನಗಳ ಸಂಖ್ಯೆಯೂ ಅವುಗಳ ಗುಣವು ಹೆಚ್ಚುತ್ತಾ ಹೋಗುತ್ತದೆ."[೧೧೭] ಶಾಸನಗಳ ಮುಖ್ಯ ಉದ್ದೇಶ ಸಾಹಿತ್ಯ ರಚನೆಯಲ್ಲದಿದ್ದರೂ, ಸಾಹಿತ್ಯ ರೂಪಗಳಾದ, ಚಂಪೂ, ಗದ್ಯ, ಷಟ್ಪಧಿ, ರಗಳೆ, ತ್ರಿಪದಿ, ಕಂದ ವೃತ್ತಗಳು ಗಮನಿಸಿದಾಗ ಸಾಹಿತ್ಯದ ರಾಶಿಯನ್ನು ಕಡೆಗಣಿಸುವಂತಿಲ್ಲ. ಈ ಶಾಸನ ಸಾಹಿತ್ಯಕ್ಕೆ ತನ್ನದೆ ಆದ ಒಂದು ವೈಶಿಷ್ಟ್ಯವಿದೆ ಎಂಬುದು ಗಮನಾರ್ಹ ಸಂಗತಿ. ಜತ್ತ ತಾಲೂಕಿನ ಉಂಬರವಾಣಿ, ಅಥಣಿ ತಾಲೂಕಿನ ಕೊಕಟನೂರು, ತೆಲಸಂಗ, ಬಳಗೇರಿ, ರಾಮತೀರ್ಥ, ಮುರಗುಂಡಿ ಶಾಸನಗಳು ಹೆಚ್ಚು ದೀರ್ಘವಾಗಿದ್ದು, ಸೊಗಸಾದ ವರ್ಣನೆಗಳಿಂದ ಕೂಡಿವೆ. ಕೆಲವೊಮ್ಮೆ ಶಾಸನ ಕವಿಯ ಹೆಸರು ಕಂಡು ಬರದ ಸಂದರ್ಭದಲ್ಲಿ ಉತ್ತಮವಾದ ಕಾವ್ಯಗುಣವನ್ನು ಹೊಂದಿರುವುದನ್ನು ಕಾಣುತ್ತವೆ. ಜತ್ ತಾಲೂಕಿನ ಉಮ್ರಾಣಿಶಾಸನದಲ್ಲಿ ಕವಿಯು ಮಾಡುವ ಉಮ್ರಾಣಿ ವರ್ಣನೆ ಕಾವ್ಯಗುಣ ಹೊಂದಿರುವುದು ಗಮನಿಸಬಹುದಾಗಿದೆ.

ಇದರಲ್ಲಿ ೧೯ ಪದ್ಯಗಳಲ್ಲಿ ೧೩ ಕಂದ ಪದ್ಯವಾಗಿದೆ. ಉಮ್ರಾಣಿನ ವರ್ಣನೆಯನ್ನು ಮಾಡುವ ಪದ್ಯವಿದು.

ಕರಹಡನೆಂಬಾ ನಾಡಿಂ–
ಗುರು ಭೂಷನದಂತಿರೀ ಕಳಂಬಡೆ ನಾಡು – ।
ದ್ದುರ ರಂಜಿತವದಳೊಳಗೆಂ
ತಿರೆ ಮೂಮತ್ತಾರು ಬಾಡವನು ಪಮ ಪುಣ್ಯಂ ॥

ವರತದ್ದೇಶದ ಮೊದಲುಂ–
ಬರವಾಣಿ ರಾಜಧಾನಿ ಬನದಿಂದಬ್ಜಾ – ।
ಕರದಿಂ ಕೆಯ್ವೊಲದಿಂ ಭಾ –
ಸುರ ನಾನಾ ಮರನಿಕೆತನಂಗಳಿನೆಸೆಗುಂ ॥

ಕ್ಷಿತಿನೋಡೆ ತನ್ನೊಳಿಪ್ಪಂ
ಚತುರಾನನನೊಬ್ಬೆಂನೊಳಿಪ್ಪರನೇಕ – ।
ಚ್ಚತುರಾನನರೆನುತಂ ಸಂ
ತತ ವುಂಬರವಾಣಿ ವಾಣಿಯಂ ನಗುತಿರ್ಕ್ಕುಂ ॥ [೧೧೮]

ಮಹಾಜನರನ್ನು ವರ್ಣಿಸುವ ಉಮ್ರಾಣಿ ಶಾಸನ ಪದ್ಯ ಕಾವ್ಯಮಯವಾಗಿ ಮೂಡಿಬಂದಿದೆ.

ಕಾಮಕ್ರೋಧವಿದೂರರಪ್ರತಿಮಮಾರ್ತ್ತಂಡೋಜ್ವಳ ಭ್ರಾಜಿತ –
ಶ್ರೀಮತ್ ಕೀರ್ತ್ತಿವಿಶಾಳರಬ್ಜಜಚರಿತ್ರೋದ್ಭಾಸಿಗಳ್ ರುಗ್ಯೆಜು –
ಸ್ಸಾ(ಸ್ಸಾ) ಮಾಥರ್ಬ್ಬಣವೇದಪಾರಗರಿಳಾಧೀಶಾರ್ಚ್ಚಿತರ್ಸ್ವತ್ವಸತ್
ಸೀಮಾಸ್ತೋಮ ರೆನಿಪ್ಪರಾ ವಸುಮತೀದೇವರ್ಕ್ಕ ತ್ತೂರ್ಜ್ಜಿತರ್ ॥

॥ ಪ್ರಜಯಂ ಪಾಳಿಸಿ ಭೃತ್ಯರಂ ಪೊರೆದು ವಿದ್ವಿಷ್ಟಾವನೀಪಾಳಕ
ಬ್ರವಜಂ ಕೊಂಡು ನ ತಾವನೀಶಕುಳಮಂ ತಂನೊಳ್ಪಮಂ ಮಾಡಿ ಕೂ -
ಡೆ ಜಸಂ ದಿಕ್ಟವೆಂಟುಮಂ ಬೆಳಗೆ ಪೆಂಪಿಂ ಪೋಲ್ತನಾಧಿಕ್ಯಮಾ (ಭೂ)
ಭುಜರಂ ರಾಯಮುರಾರಿ ಸೋಮಮಹಿಪಂ ಶ್ರೀಬಿಜ್ಜಭೂಪಾತ್ಮಜಂ॥

ಇದೆ ಶಾಸನದಲ್ಲಿ ದಾನ ಕಾಯ್ವನ್ನು ಮಾಡಿ ಪ್ರಸಿದ್ಧಿಯನ್ನು ಹೊಂದಿದ ಕಲ್ಲಿಸೆಟ್ಟಿಯ ಸಾಧನೆಯನ್ನು ಕೊಂಡಾಡುವ ಪದ್ಯ ಗಮನಾರ್ಹವಾದುದು.

"ಹುಸಿದೆಯ್ವಂತವಗಾಗಿರೆ
ಆಸವರನಂ ನೀಡದಳರೆ ಧನಮಂ ಹಡವಾ
ಬ್ಯಸನದ ವೈಶ್ಯರ್ಗ್ಗಣಯೇ
ಜಸದೊಡಯಂ ಕಲ್ಲಿಸೆಟ್ಟಿಷ್ಟಾಧಾರಂ" [೧೧೯]

ಈ ರೀತಿಯಾಗಿ ಕವಿಯು ಕಂದಪದ್ಯಗಳಲ್ಲಿ ಕಿರಿದಾದ ಭಾವಗಳನ್ನು ಸುಂದರವಾಗಿ ಹಿಡಿದಿಟ್ಟಿದ್ದಾನೆ.

**ಶಾಸನ ಕವಿಗಳು:**

ಶಾಸನ ಕಾವ್ಯ ರೂಪಗೊಳ್ಳಬೇಕಾದರೆ ಮೊದಲು ಶಾಸನಗಳನ್ನು ತಾಳೆಗರಿಯ ಮೇಲೆ ಒಬ್ಬ ಬರೆಯಬೇಕು. ಇನ್ನೊಬ್ಬ ಅದನ್ನು ಕಾವ್ಯತರವಾಗಿ ಹೇಳಬೇಕು. ಮೂರನೆಯವ ಅದನ್ನು ಉಳಿಯ ಸಹಾಯದಿಂದ ಶಿಲೆಗಳ ಮೇಲೆ ಕೆತ್ತಬೇಕು. ಹೀಗೆ ಒಂದು ಶಾಸನ ನಿರ್ಮಾಣದಲ್ಲಿ ಮೂರು ಜನರ ಸಹಾಯವಿರುತ್ತದೆ. ಒಮ್ಮೊಮ್ಮೆ ಕವಿಯು ಕಂಡರಣೆಕಾರನು ಒಬ್ಬನೆ ಆಗಿದ್ದರೆ. ಇಬ್ಬರ ಸಹಾಯ ಬೇಕಾಗುತ್ತದೆ. ಶಾಸನದ ಕೊನೆಯಲ್ಲಿ "ರಚಿಯಿಸಿದವರ ಬರೆದಂ" ಎಂದಿದ್ದರೆ. ಆತ ಕೇವಲ ಶಿಲ್ಪಿ, ಕಂಡರಣೆಕಾರ ಎಂದು ತಿಳಿಯಬೇಕು. ಸಾಮಾನ್ಯವಾಗಿ ಶಾಸನವನ್ನು ಕೊರೆಯುತ್ತಿದ್ದ ಶಿಲ್ಪಿಗಳು ತಮ್ಮನ್ನು 'ರೂವಾರಿ' (ರೂಪಕಾರಿ) ಮತ್ತು 'ಸರಸ್ವತಿ ಗನದಾಸಿ'ಗಳೆಂದು ಕರೆದುಕೊಂಡಿದ್ದಾರೆ. ಇವರು ಸುಂದರ ಅಕ್ಷರ ಬರೆಯುವ ಮತ್ತು ಶಿಲ್ಪಕಲೆಯಲ್ಲಿ ಪರಿಣತಿಗಳಾಗಿರುತ್ತಾರೆ.[೧೨೦] ಹಿಗಾಗಿ ಒಮ್ಮೊಮ್ಮೆ ಶಾಸನದಲ್ಲಿ ಯಾರು ಬರೆದರು ಎನ್ನುವುದು ಗೊತ್ತಾಗುವುದಿಲ್ಲ. ಆದರೆ ಕೆಲವು ಕಡೆ ಅಪರೂಪವಾಗಿ ಹೆಮ್ಮೆಯಿಂದ ತಮ್ಮ ಹೆಸರನ್ನು ಸ್ಪಷ್ಟವಾಗಿ ಶಾಸನ ಕವಿಗಳು ತಮ್ಮ ಹೆಸರನ್ನು ಹೇಳಿಕೊಂಡಿದ್ದಾರೆ.

**ಜಿನವರ್ಮ ಪಂಡಿತ:**

ಅಥಣಿ ನಾಡಿನ ಕೊಕಟನೂರು ಶಾಸನದಲ್ಲಿ ಮಹಾಮಂಡಳೇಶ್ವರನಾದ ಜೋಗ ಭೂಪನ ಹೇಳಿಕೆಯಂತೆ ಕವಿ ಜಿನವರ್ಮ ಪಂಡಿತನು ಶಾಸನವನ್ನು ರಚಿಸಿದ್ದಾಗಿ ಹೇಳಿದ್ದಾನೆ.

"ಜನಿತೋತ್ಸಾಹದ ಮಂಡಳೇಶತಿಳಕಂ ಶ್ರೀ ಜೋಗಭೂಪಂ ಜಗ
ಜ್ಜನ ಚಿಂತಾಮಣಿ ತನಿದಂ ಬೆಸಸಲಿ ತ್ರೈಮೂರ್ತಿದೇವರ್ಗೆ ಶಾ
ಸನಮಂ ಶಾಸನಮಾಗಲೆಯ್ದೆ ಬರೆದಂ ವಿದ್ವಜ್ಜನಾಂಭೋಜಿನೀ
ವನಹಸಂ ಜಿನವರ್ಮಪಂಡಿತನಿಳಾ ಭಾಸ್ವದ್ಯಶೋ ಪಂಡಿತಂ ॥" [೧೨೧]

ಈ ಶಾಸನದ ಪ್ರಾರಂಭದಲ್ಲಿ ಸಂಸ್ಕೃತ ಶ್ಲೋಕವಿದ್ದು ೧೭ ಕನ್ನಡ ಪದ್ಯಗಳಿವೆ. ಹದಿನಾರನೇ ಪದ್ಯದಲ್ಲಿ ವಿದ್ವಜ್ಜನಾಂಭೋಜನೀವನ ಹಂಸನೇಂದು ಬಿರುದಾಂಕಿತನಾಗಿದ್ದನ್ನು ಹೇಳಿದೆ. ಕವಿ ಜಿನವರ್ಮ ಪಂಡಿತ ಉಭಯ ಭಾಷಾ ವಿಶಾರದನಾಗಿರುವುದು ಇದರಿಂದ ತಿಳಿದುಬರುತ್ತದೆ.

ಈ ಶಾಸನದಲ್ಲಿ ಕಲ್ಯಾಣ ಚಾಲುಕ್ಯ ಚಕ್ರವರ್ತಿ ತ್ರೈಲೋಕ್ಯಮಲ್ಲದೇವನ ಆಳ್ವಿಕೆಗೆ ಸಂಬಂಧಿಸಿದ್ದು, ಚಕ್ರವತಿಯ ಪಾದಪದ್ಮೋಪಜೀವಿಯಾದ ಮಹಾಮಂಡಳೇಶ್ವರ ಜೋಗಪಯ್ಯ ಕರಹಡನಾಲ್ಸಾಸಿರ ಮತ್ತೆ ಮರಿಂಜೆ ಮೂರು ಸಾವಿರಗಳನ್ನು ಆಳುತ್ತಿದ್ದ ಸಂಗತಿ ಹೇಳಿ ಜೋಗಪಯ್ಯ ಮತ್ತು ಆತನ ಅರಿಸಿ ಪೊಲ್ಲಿಕಬ್ಬೆ ಸೇರಿ ವೈಶ್ಯಾಗ್ರಣಿ ಕೂಜಿಸೆಟ್ಟಿ ಮಾಡಿಸಿದ ತ್ರೈಪುರುಷದೇವಾಲಯಕ್ಕೆ ಜನ್ನವಾಡ ಗ್ರಾಮವನ್ನು ದತ್ತಿ ಬಿಟ್ಟಿದ್ದನ್ನು ಉಲ್ಲೇಖಿಸಿದೆ. ಇದೇ ಶಾಸನದಲ್ಲಿ ವೈಶಾಗ್ರಣಿ ಕೂಚಶೆಟ್ಟಿ ಅಲ್ಲಿಯ ದೇವರ ತಪೋಧನರಿಗೆ ಮತ್ತು ಶಾಲೆಯನ್ನೊದುವ ವಿದ್ಯಾರ್ಥಿಗಳಿಗೆ ಉಪಾಧ್ಯಾಯರಿಗೆ ದಾನ ಕೊಟ್ಟಿದ್ದನ್ನು ತಿಳಿಸುತ್ತದೆ.

**ಮಲ್ಲಿದೇವ:**

ಅಥಣಿ ತಾಲೂಕಿನ ರಾಮತೀರ್ಥ ಶಾಸನವು[೧೨೪] "ವಾಸುಗಿಯ ಮಹಿಮೆಯಂ ಬಣ್ಣಿಸಲ್ಬನಾವಂ ಮಲ್ಲಿದೇವನೊರ್ವ್ವನೆ ವಿಬ್ಧಾಶ್ರಯಂ ಚತುರನೀ ರಥನೀ ಪತಿ ಮಲ್ಲಿದೇವನೊಪ್ಪನೇ ಧರೆಗುಂಬ ತಾಂಬ್ರ ಶಾಸನದಂ ಶ್ರೀ ರಾಮೇಶ್ವರ ದೇವಶರಣರು" ಎಂದು ಹೇಳಿರುವುದರಿಂದ ಕವಿ ಮಲ್ಲಿದೇವನು ಕವಿಯಾಗಿರುವುದು ಸ್ಪಷ್ಟವಾಗುತ್ತದೆ. ಈತ ವಾಸುಗಿಯ ಮಹಿಮೆಯನ್ನು ಬಣ್ಣಿಸಲು ಸಮರ್ಥನಾಗಿದ್ದ, ಚತುರನಾಗಿದ್ದ, ವಿಬುದಾಶ್ರಯನಾಗಿದ್ದ ಎನ್ನುತ್ತದೆ ಶಾಸನ. ಕಲಚೂರಿ ಬಿಜ್ಜಳದೇವನ ಕಾಲಕ್ಕೆ ಸಂಬಂಧಿಸಿದ್ದ ಮಹಾಮಂಡಳೇಶ್ವರ, ಪೆರ್ಮ್ಮಾಡಿ, ಮಹಾಮಂಡಳೇಶ್ವರ ಬನ್ನರ ಮತ್ತು ಸುಂಕವೆರ್ಗ್ಗಡೆ ನಾಗದೇವಯ್ಯ ಸೇರಿ ಶ್ರೀ ಸ್ವಯಂಯಂಭು ರಾಮೇಶ್ವರ ದೇವರ ಸ್ಥಾನಾಚಾರ್ಯರಿಗೆ ದತ್ತಿ ಬಿಟ್ಟಿದ್ದನ್ನು ತಿಳಿಸಿದೆ.

**ಅಗ್ನಿಶರ್ಮ :**

ಅಥಣಿ ತಾಲೂಕಿನ ಮುರಗುಂಡಿ ಶಾಸನದಲ್ಲಿ ಅಗ್ನಿಶರ್ಮನು ಕುರಿತು ಉಲ್ಲೇಖ ಬಂದಿದ್ದು ಈತನು ಶಾಸನ ರಚಿಸಿದನೆಂದು, ಚತುರ್ಭಾಷಾ ಕವಿ ಚಕ್ರವರ್ತಿ ಎಂದು

ಕರೆಮಕೊಂಡಿದ್ದಾನೆ. ಈ ಕವಿಯು ದೊಕೆಗಾಳಿ ಶಾಸನವನ್ನು ಬರೆದಿರುವುದಾಗಿ ತಿಳಿದು ಬರುತ್ತದೆ.[೧೨೫]

**ಲಕ್ಷ್ಮೀಧರ ಪಂಡಿತ:**

ಮುರುಗುಂಡಿ ಶಾಸನ ಎರಡು ದೃಷ್ಟಿಯಿಂದ ಪ್ರಮುಖವಾಗಿದೆ. ಇದು ಶಾಸನ ರಚಿಸಿದ ಅಗ್ನಿಶರ್ಮ ಹಾಗೂ ಶಾಸನ ಬರೆದ ಲಕ್ಷ್ಮೀಧರ ಪಂಡಿತರನ್ನು ಉಲ್ಲೇಖಿಸುತ್ತದೆ.[೧೨೬] ಲಕ್ಷ್ಮೀಧರ ಪಂಡಿತ ಮೂಲತಃ ಕವಿಯಾಗಿರಬಹುದು (ಪಂಡಿತ ಪದ ಅದನ್ನು ಸೂಚಿಸುತ್ತದೆ) ಆದರೆ ಪ್ರಸ್ತುತ ಶಾಸನವನ್ನು ಅಗ್ನಿಶರ್ಮ ರಚಿಸಿದನೆಂದಿರುವುದರಿಂದ ಇವನು ಅದನ್ನು ಕಲ್ಲಮೇಲೆ ಬರೆದವನಾಗಿರಬೇಕು ಎಂದು ಭಾವಿಸಬೇಕಾಗುತ್ತದೆ.

ಕಲಚೂರಿ ಅಹಮಲ್ಲನ ಆಳ್ವಿಕೆಯ ಅವಧಿಯನ್ನು ತಿಳಿಸುವ ಈ ಶಾಸನವು ಅಹಮಲ್ಲನ ಮಂತ್ರಿಯಾದ ಸೋಮಚಮುಪತಿಯಂ ಸತ್ತಿಯ ನರಸಿಂಹ ದೇವರಿಗೆ ದತ್ತಿಬಿಟ್ಟು ಕೊಟ್ಟದನ್ನು ಹೇಳುತ್ತದೆ. ಸಾಮಾನ್ಯವಾಗಿ ಮಧ್ಯಯುಗದ ಕನ್ನಡ ಶಾಸನಗಳು ಕೇವಲ ಗದ್ಯ ಇಲ್ಲವೆ ಪದ್ಯಗಳಿಗೆ ಬದಲು ಗದ್ಯ – ಪದ್ಯಗಳ ಮಿಶ್ರಣವಾದ ಚಂಪೂ ರೂಪದಲ್ಲಿ ಅರಳಿನಿಂತವು. ಇದಲ್ಲದೆ 'ಪುರಾಣಂ ಪಂಚಲಕ್ಷಣಂ' ಎಂಬ ಆದರ್ಶದಲ್ಲಿ 'ಶಾಸನಂ ಪಂಚಲಕ್ಷಣಂ' ಎಂಬ ಸೂತ್ರವನ್ನು ಕಲ್ಪಿಸಿಕೊಂಡು, ಅದರ ಆದರ್ಶದಲ್ಲಿ ದೇವತಾಸ್ತುತಿ, ದೇಶ ವರ್ಣನೆ, ಕ್ಷೇತ್ರ ವರ್ಣನೆ, ಚಕ್ರವತಿ ಸಾಮಂತ, ವಿವರಣೆ, ದಾನಿ, ದಾನಮಿತ್ರ, ದಾನವಸ್ತು, ಸಮಾಪ್ತಿವಾಕ್ಯ ಎಂದು ವಿಶಿಷ್ಟ ಕ್ರಮವಿನ್ಯಾಸವನ್ನು ಪಡೆದವು.[೧೨೭] ಅಥಣಿ ತಾಲೂಕಿನ ಕಲ್ಯಾಣ ಚಾಲುಕ್ಯ, ಕಲಚುರಿ, ಮತ್ತು ಸೇವುಣರ ಕಾಲಕ್ಕೆ ಸಂಬಂಧಿಸಿರುವುದರಿಂದ ಇವುಗಳಲ್ಲಿ ಚಂಪೂರೂಪ ಪಂಚಲಕ್ಷಣ ವಿನ್ಯಾಸ, ಕೊಕಟನೂರು ಶಾಸನ, ಜತ್ತ ತಾಲೂಕಿನ ಉಮ್ರಾಣಿ ಶಾಸನಗಳಲ್ಲಿ ಕಂಡು ಬರುತ್ತದೆ. ಕಣಂಬಡೆ ನಾಡನ್ನು ಉಲ್ಲೆಖಿಸುವ ನೆರೆಯ ತರಿಕಾಡುನಾಡಿನ ಸಂಖ[೧೨೮] ಶಾಸನ ಜತ್ತ ತಾಲೂಕಿನ ಉಮ್ರಾಣಿ, ಅಥಣಿ ತಾಲೂಕಿನ ರಾಮತೀರ್ಥ, ಕೊಕಟನೂರು ಮತ್ತು ರಾಮತೀರ್ಥದ ಸ್ವಯಂಭ ರಾಮೇಶ್ವರ ಸ್ಥಾನಾಚಾರ್ಯರ ವಂಶಾವಳಿಯನ್ನು ತಿಳಿಸುವುದರಿಂದ ಸಾಹಿತ್ಯ ದೃಷ್ಟಿಯಿಂದ ಈ ಶಾಸನವೂ ಪ್ರಮುಖವಾಗಿದೆ.

**ಅಥಣಿ ತಾಲೂಕಿನ ಶಾಸನ ಸಾಹಿತ್ಯ :**

**ಶಾಸನಗಳಲ್ಲಿ ಛಂದಸ್ಸು:**

ಶಾಸನಗಳು ವ್ಯವಹಾರಿಕ ದಾಖಲೆಗಳಾಗಿರುವುದರಿಂದ ಭಾಷೆಯ ಆರಂಭದ ಕಾಲದಲ್ಲಿಯೆ ರೂಪಗೊಂಡಿರುತ್ತವೆ. ಆದ್ದರಿಂದ ಯಾವುದೇ ಭಾಷೆ ಅಥವಾ ಸಾಹಿತ್ಯದ ಉಗಮದ ಮೇಲೆ ಅವು ಅಮೂಲ್ಯ ಬೆಳಕು ಬೀರುತ್ತವೆ. ಅವುಗಳ ತಲಸ್ಪರ್ಶಿ ಅಧ್ಯಯನದಿಂದ ಆಯಾ ಭಾಷೆ ಸಾಹಿತ್ಯಗಳ ಪ್ರಾಚೀನತೆಯನ್ನು ನಿರ್ಣಯಿಸಬಹುದು.

ರಾಜಕೀಯ ಚರಿತ್ರೆ ರಚನೆಗೆ ಶಾಸನಗಳು ಮೂಲ ಬೀಜಗಳಾದಂತೆ ಭಾಷೆ ಸಾಹಿತ್ಯಗಳ ಹಳಮೆಯನ್ನು ಪ್ರಚುರ ಪಡಿಸಲು ಅವು ಅತ್ಯಂತ ವಿಶ್ವಾಸಾರ್ಹ ಸಾಧನೆಗಳೆನಿಸಿವೆ.

ಶಾಸನಗಳು ಆಯಾ ಕಾಲದ ಜನಭಾಷೆಯಲ್ಲಿ ಲಿಖಿತಗೊಂಡ ದಾಖಲೆಗಳು. ಇವು ನಡೆದು ಬಂದ ರೀತಿ, ಸಾಧಿಸಿದ ಸಾಹಿತ್ಯ ಸಿದ್ಧಿಯೂ ಅಷ್ಟೇ ಮೌಲಿಕವಾಗಿವೆ. ೩೦೦೦ ದಷ್ಟು ಅನ್ಯಭಾಷಾ ಶಾಸನಗಳನ್ನು ಬಿಟ್ಟರೆ ಉಳಿಯುವ ಸುಮಾರು ೨೦ ಸಾವಿರ ಕನ್ನಡ ಶಾಸನಗಳಲ್ಲಿ ಸಾಹಿತ್ಯ ಗುಣದಿಂದ ಕೂಡಿದ ಸಾವಿರಾರು ಸಂಖ್ಯೆಯಲ್ಲಿವೆ. ಇವುಗಳಲ್ಲಿ ಮೊದಮೊದಲು ಸಾಮಾನ್ಯ ಗದ್ಯ ಹೆಚ್ಚು ಬರುಬರುತ್ತ ಸಮಾಸಯುಕ್ತ ಪದ್ಯ ಮತ್ತು ಗದ್ಯ ಪದ್ಯ ಮಿಶ್ರಣ ಹೆಚ್ಚಾಗಿ ಕಂಡುಬರುತ್ತದೆ. ಗದ್ಯ ಪದ್ಯಗಳ ಅದರಲ್ಲಿಯೂ ಕಂದ ವೃತ್ತಗಳ ಬಳಕೆ ಅಧಿಕ. ಗದ್ಯ ಸಾಮಾನ್ಯವಾಗಿದೆ. [೧೨೯]

ಅಥಣಿ ತಾಲೂಕಿನ ಕೊಕಟನೂರು ಮತ್ತು ಜತ್ತ ತಾಲೂಕಿನ ಉಮ್ರಾಣಿ ಶಾಸನಗಳಲ್ಲಿ ಸಾಹಿತ್ಯದ ರೂಪಗಳಾದ ಚಂಪೂ, ವೃತ್ತ, ಮತ್ತು ಕಂದ ಬಳಕೆಗೊಂಡಿರುವುದು ಕಾಣುತ್ತವೆ. ಈ ನಾಡಿನ ಶಾಸನಗಳ ರಚನೆಯಲ್ಲಿ ಕರ್ನಾಟಕ ಖ್ಯಾತ ವೃತ್ತಗಳಾದ ಮಹಾಸ್ರಗ್ಧರಾವೃತ್ತ, ಮತ್ತೇಭವಿಕ್ರಿಡೀತ ವೃತ್ತ, ಚಂಪಕಮಾಲೆ ವೃತ್ತ, ಶಾಲಿನೀ ವೃತ್ತ ಅನುಷ್ಟಪ, ಮಾಲಿನಿ, ಶಾರ್ದೂಲ ವಿಕ್ರೀಡಿತ ವೃತ್ತಗಳು ಮತ್ತು ಕಂದ ಪದ್ಯಗಳು ಕಂಡುಬಂದಿರುವುದು ಗಮನಾರ್ಹವಾಗಿದೆ. ಅವುಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

ಕೊಕಟನೂರು ಶಾಸನವು[೧೩೦] ಹನ್ನೋಂದು ವೃತ್ತಗಳನ್ನು ಒಳಗೊಂಡಿದ್ದು ಇವುಗಳಲ್ಲಿ ಮೂರು ಮಹಾಸ್ರ್ಯಗ್ಧರ ವೃತ್ತ, ಐದು ಮತ್ತೇಭವಿಕ್ರೀಡಿತ ವೃತ್ತಗಳು, ಒಂದು ಚಂಪಕ ಮಾಲಾ ವೃತ್ತ, ಒಂದು ಶಾಲಿನಿ ವೃತ್ತ ಮತ್ತು ಒಂದು ಅನುಷ್ಟುಪ್ ವೃತ್ತಗಳು ಪದ್ಯಗಳಿವೆ. ಆದರೆ ಶಾಸನವು ಅಲ್ಲಲ್ಲಿ ತ್ರುಟಿತವಾಗಿರುವುದರಿಂದ ಸ್ಪಷ್ಟವಾಗಿರುವ ಕೆಲವು ವೃತ್ತಗಳ ಉದಾಹರಣೆಯನ್ನು ವಿವರಿಸಿದೆ.

ಮತ್ತೇಭಪಿಕ್ಕೀಡಿತ ವೃತ್ತ:

ಜನಿತೊತ್ಸಾಹದ ಮಣ್ಣಳೇಶತಿಳಕಂ ಶ್ರೀ ಜೋಗಭೂಪಂ ಜಗ
ಜನಚಿನ್ತಾಮಣಿ ತಾನಿದಂ ಬೆಸಸಲೀ ತ್ರೈಮೂರ್ತಿದೇವರ್ಗ್ಗೇ ಶಾ
ಸನಮುಂ ಶಾಸನಮಾಗಲೆಯ್ದೆ ಬರೆದಂ ವಿದ್ವಜನಾಂಭೋಜನೀ
ವನಹಂಸಂ ಜೀನವರ್ಮಪಣ್ಡಿತನಿಳಾಭಾಸ್ವದ್ಯಶೋಮಣ್ಡಿತಂ॥ [೧೩೧]

ಲಕ್ಷಣ: ಈ ಶಾಸನ ಪದ್ಯದಲ್ಲಿ ಮತ್ತೇಭವಿಕ್ರೀಡಿತದ ಎಲ್ಲಾ ನಿಯಮಗಳಿದ್ದು ಪ್ರತಿ ಪಾದದಲ್ಲಿ ಇಪ್ಪತ್ತು ಅಕ್ಷರಗಳು ಬಂದಿವೆ. ನಾಲ್ಕು ಸಾಲಿನಪದ್ಯವಾಗಿರುವ ಇದರಲ್ಲಿ ಪ್ರತಿಪಾದದಲ್ಲಿ ಸ,ಭ,ರ,ನ,ಮ,ಯ ಗಣಗಳು ಬಂದಿದ್ದು ಕೊನೆಯಲ್ಲಿ ಒಂದು ಲಘು, ಒಂದು ಗುರು ಉಳಿದಿದೆ. ಹದಿಮೂರನೆಯ ಸ್ಥಾನದಲ್ಲಿ ಯತಿ' ಬಂದಿದೆ. ಹಾಗೂ ಪ್ರತಿ ಪಾದದಲ್ಲಿ 'ಆದಿಪ್ರಾಸ' ಕಾಣಬಹುದಾಗಿದೆ.

**ಚಂಪಕಮಾಲಾ ವೃತ್ತ:**

ಜನಕಜೆ ಸಾಟಿ ಹೇಮವತಿ – ರೋಹಿಣಿ ತತ್ಸರೂಪೆವಾ
ಗ್ವನಿತೆ ಸಮಂ ತಿಳೋತ್ತಮ ಸಮಾನ ಮರುನ್ದತಿ ಮಿಕ್ಕ ಪೊ ಲ್ವ ಗೋ
ಮಿನಿ ದೊರೆ ಸತ್ಯಭಾಮೇ ಸರಿ ರೇಣುಕಿ ಮನ್ಮಥಪ್ರಿಯಾಂ
ಗನೆ ದೊರೆಂಬುದೆಂಬುದು ಪೆರದ್ದೊರೆಯೆಂಬುದೆ ಪೊಲ್ಲಿಕಬ್ಬೆಯೊಳ್ [೧೩೨]

ಲಕ್ಷಣ : ಚಂಪಕಮಾಲಾ ವೃತ್ತವು ನಾಲ್ಕು ಪಾದಗಳ ಸಮವರತ್ತ ಪದ್ಯ, ಪ್ರತಿ ಚರಣದಲ್ಲಿ ಇಪ್ಪತ್ತೊಂದು ಅಕ್ಷರಗಳಿರುವುದು. ಹಾಗೂ ನ,ಜ,ಭ,ಜ,ಜ,ರ ಎಂಬ ಗಂಗಳಿವೆ ಅಲ್ಲದೆ ಹದಿಮೂರನೆಯ ಅಕ್ಷರದಲ್ಲಿ 'ಯತಿ' ಮತ್ತುಪ್ರತಿಯೊಂದು ಚರಣದ ಆದಿಯಲ್ಲಿ ನಾಲ್ಕು ಲಘು ಬಂದಿರುವುದರಿಂದ ಇದು ಚಂಪಕಮಾಲಾ ವೃತ್ತ ಎಲ್ಲ ನಿಯಮಗಳನ್ನು ಒಳಗೊಂಡಿರುತ್ತದೆ.

**ಮಹಾಸ್ರಗ್ಧರಾ ವೃತ್ತ:**

ಕೆಳಗಿನ ಶಾಸನ ಪದ್ಯವು ಮಹಾಸ್ರಗ್ಧರಾವೃತ್ತದ ಎಲ್ಲ ನಿಯಮಗಳನ್ನು ಒಳಗೊಂಡಿರುವುದು ಕಂಡು ಬರುತ್ತದೆ.

ನಿಮಗಾ ಕಳ್ಯಾಯುವಂ ಶ್ರೀಯುಮನತನುಜಯಶ್ರೀಯವಂಕೂರ್ತ್ತ ತಾವೀ
ಗೆ ಮಹತ್ಸಿನ್ದೂರರಾಗಾಸಿತ ಸಿತತನುಗಳ್ ವಾಗ್ವಧೂಗೋಮಿನೀಹಿ
ರ್ಮ್ಮಮಹೀಭೃತ್ಕನಕಾ ಸಂಗಮ ಸುಖನಿರತರ್ ಹಾಲ -- ಕ್ಷಲೀಲಾ
ಗಮನರ್ ಮೂರ್ತ್ತಿಪ್ರಯಾಳಂಕೃತರಜಹರಿದುಧಾಭಿಧಾನರ್ತ್ರಿದೇವರ ॥ [೧೩೩]

ಜತ್ತ ತಾಲೂಕಿನ ಉಮ್ರಾಣಿ ಶಾಸನವು ಐದು ಮತ್ತೇಭವಿಕ್ರೀಡಿತ ವೃತ್ತವನ್ನು, ಮತ್ತು ಒಂದು ಶಾರ್ದೂಲವಿಕ್ರೀಡಿತದ ವೃತ್ತದ ಪದ್ಯಗಳನ್ನು ಹೊಂದಿದ್ದು ಅದನ್ನು ಖ್ಯಾತ ಕರ್ನಾಟಕ ವೃತ್ತದ ನಿಯಮಗಳ ಹಿನ್ನಲೆಯಲ್ಲಿ ಗಮನಿಸಲಾಗಿದೆ.

**ಮತ್ತೇಭ ವಿಕ್ರೀಡಿತವೃತ್ತ:**

ಪ್ರಜಯಂ ಪಾಳಿಸಿ ಭೃತ್ಯರಂ ಪೊರೆದು ವಿದ್ವಿಷ್ಟಾವನೀ ಪಾಳಕ
ಬ್ರಜವಂಕೊಂಡುನತಾವನೀಶಕುಳವಂ ತಂನೊಳ್ಸಮಂ ಮಾಡಿಕೂ
ಡೆ ಜಸಂದಿಕ್ತಟವೆಂಟುಮಂ ಬೆಳಗೆ ಪೆಂಪಿಂ ಪೊಲ್ತನಾಧಿಕ್ಯಮಾಭೂ
ಭುಜರಂ ರಾಯಮೂರಾರಿಸೋಮ ಮಹಿಪಂ ಶ್ರೀ ಬಿಜ್ಜ ಭೂಪಾತ್ಮಜಂ ॥ [೧೩೪]

ಲಕ್ಷಣ : ಈ ಪದ್ಯದಲ್ಲಿ ಮತ್ತೇಭವಿಕ್ರೀಡಿತದ ಎಲ್ಲ ನಿಯಮಗಳನ್ನು ಕಾಣಬಹುದು. ಪ್ರತಿ ಪಾದದಲ್ಲಿ ಇಪ್ಪತ್ತು ಅಕ್ಷರಗಳು ಬಂದಿವೆ. ಇದು ನಾಲ್ಕು ಸಾಲಿನ ಪದ್ಯವಾಗಿದ್ದು ಪ್ರತಿಯೊಂದು ಪಾದವು ಸ, ಭ, ರ, ನ, ಮ, ಯ ಗಣಗಳು ಮತ್ತು ಕೊನೆಯಲ್ಲಿ ಒಂದು ಲಘು, ಒಂದು ಗುರು ಬಂದಿದ್ದು, ಹದಿಮೂರನೆಯ ಸ್ಥಾನದಲ್ಲಿ ಯತಿ ಬಂದಿದೆ. ಪದ್ಯದ ಪ್ರತಿ ಪಾದದಲ್ಲಿ ಆದಿಪ್ರಾಸ ಬಂದಿರುತ್ತದೆ.

**ಶಾರ್ದೂಲವಿಕ್ರೀಡಿತ ವೃತ್ತ:**

ಈ ವೃತ್ತದ ಒಂದು ಪದ್ಯ ಇದೆ. ಶಾಸನದಲ್ಲಿ ಕಂಡುಬರುತ್ತದೆ. ಈ ವೃತ್ತದ ನಿಯಮಗಳ ಹಿನ್ನಲೆಯಲ್ಲಿ ಹೀಗೆ ಗಮನಿಸಲಾಗಿದೆ.

ಕಾಮಕ್ರೋಧ ವಿದೂರರ ಪ್ರತಿ ಮಾವೂರ್ತ್ತಂಡೋಜ್ವಳ ಭ್ರಾಜಿತ
ಶ್ರೀಮತ್‌ಕೀರ್ತ್ತಿ ವಿಸಾಳರಬ್ಜಜಚರಿತ್ರೋದ್‌ಭಾಸಿಗಳ್ ರುಗ್ಯಜು
ಸ್ಯಾಮಾತರ್ಬ್ಬಣದೇವ ಪಾಠಗರಿಳಾಧೀಶಾರ್ಚ್ಚಿತ ಸ್ವಸ್ತ್ಯಸತ್
ಸೀಮಾಸ್ತೋಮರೆನಿಪ್ಪರಾ ವಸುಮತಿದೆವರ್ಕ್ಕಳತ್ಯೂರ್ಜ್ಜಿತರ್ [೧೩೫]

ಲಕ್ಷಣ : ನಾಲ್ಕು ಪಾದವುಳ್ಳ ಸಮವೃತ್ತ ಪದ್ಯ ಪ್ರತಿ ಚರಣದಲ್ಲಿ ಹತ್ತೊಂಭತ್ತು ಅಕ್ಷರಗಳವೆ. ಪ್ರತಿಯೊಂದು ಸಾಲಿನಲ್ಲಿ ಮ,ಸ,ಜ,ಸ,ತ,ತ, ಎಂಬ ಹನ್ನೆರಡೆಯ ಅಕ್ಷರಸ್ಥಾನದಲ್ಲಿ 'ಯತಿ' ಯ ಇರುವುದು ಹಾಗೂ ಈ ವೃತ್ತದ ಪ್ರತಿಯೊಂದು ಚರಣದ ಆದಿಯಲ್ಲಿ ಮೂರು ಗುರುಗಳು ಬರುತ್ತವೆ.ಮುಖ್ಯವಾಗಿ ಲಿಪಿಯ ಆಧಾರದ ಮೇಲೆ ಕೆಲವೊಮ್ಮೆ ಐತಿಹಾಸಿಕ ಸಾಕ್ಷ್ಯಗಳ ಆಧಾರದ ಮೇಲೆ ಸು. ೭–೮ನೇ ಶತಮಾನಗಳಿಗೆ ಸೇರಿದವೆಂದು ಗೊತ್ತು ಮಾಡಿರುವ ಶ್ರವಣಬೆಳಗೊಳದ ಶಾಸನ ಪದ್ಯಗಳು ಭಾಷೆ ಛಂದಸ್ಸುಗಳ ದೃಷ್ಟಿಯಿಂದ ಈಚೀನ ವ್ಯಾಕರಣ ಛಂದಶಾಸ್ತ್ರಗಳ ಕಟ್ಟು ಕಟ್ಟಳೆಗಳಿಗೆ ಒಳಪಡುವ ರೀತಿಯ ರಚನೆಗಳನ್ನು ಅಲ್ಲಲ್ಲಿ ಮನಗಾಣುತ್ತವೆಂಬುದರಲ್ಲಿ ಸಂದೇಹವಿಲ್ಲ.

**ಕಂದಪದ್ಯ**

ಜತ್ತ ತಾಲೂಕಿನ ಉಮ್ರಾಣಿ [೧೩೬] ಮತ್ತು ಅಥಣಿ ತಾಲೂಕಿನ ಕೊಕಟನೂರು[೧೩೭] ಶಾಸನಗಳಲ್ಲಿ ಒಟ್ಟು ಇಪ್ಪತ್ತು ಕಂದ ಪದ್ಯಗಳು ಬಳಕೆಯಾಗಿರುವುದು ಗೊತ್ತಾಗುತ್ತದೆ. ಉದಾಹರಣೆಗಾಗಿ ಕೆಲವೊಂದು ಕಂದ ಪದ್ಯಗಳನ್ನು ಮಾತ್ರ ಅದ್ಯಯನಕ್ಕೆ ಬಳಸಿಕೊಳ್ಳಲಾಗಿದೆ.ಕಂದ ಪದ್ಯವು ನಾಲ್ಕು ಸಾಲುಗಳ ಒಂದು ಛಂದೋಬಂಧವಾಗಿದ್ದು ಹಳಗನ್ನಡ ಚಂಪೂ ಕಾವ್ಯಗಳಲ್ಲಿ ಬಳಕೆಯಾದಂತೆ ಶಾಸನಗಳಲ್ಲಿಯೂ ಬಳಕೆಗೊಂಡಿರುವುದು ಗಮನಾರ್ಹ. ಕನ್ನಡ ಸಾಹಿತ್ಯದ ರತ್ನತ್ರಯರಾದ ಪಂಪ, ರನ್ನ ಮತ್ತು ಪೊನ್ನರು ವೃತ್ತಗಳನಡುವೆ ಕಂದ ಪದ್ಯಗಳನ್ನು ವಿಶೇಷವಾಗಿ ಬಳಸಿಕೊಂಡಿದ್ದು ಕಂಡುಬರುತ್ತದೆ. ಕಂದ ಸಂಸ್ಕೃತದಲ್ಲಿ ಆರ್ಯಗೀತ ಎನಿಸಿದರೂ, ಪ್ರಾಕೃತದಲ್ಲಿ 'ಸ್ಕಂದಕ' ಎನಿಸಿದ ಛಂದೋವಿಧಾನವು ಕನ್ನಡದಲ್ಲಿ ಕಂದವಾಗಿದೆ. [೧೩೮]

ಲಕ್ಷಣ : ಕಂದವು ನಾಲ್ಕು ಪದಗಳಿಂದ ಕೂಡಿದ ಅರ್ದ ಸಮವೃತ್ತ ಪದ್ಯ ಮೊದಲನೆಯ ಮತ್ತು ಮೂರನೆಯ ಪಾದಗಳಲ್ಲಿ ನಾಲ್ಕು ಮಾತ್ರೆಯ ಮುರು ಗಣಗಳು ಬರುತ್ತವೆ. ಎರಡನೆಯ ಮತ್ತು ನಾಲ್ಕನೇಯ ಪಾದಗಳಲ್ಲಿ ನಾಲ್ಕು ಮಾತ್ರೆಯ ಐದು ಗಣಗಳುಬರುತ್ತವೆ. ಮೂರು ಐದು ಮತ್ತು ಏಳನೆಯ ವಿಷಯ ಸ್ಥಾನದಲ್ಲಿ 'ಜ' ಗಣ ಬರಕೂಡದು ಎರಡು ಮತ್ತು ನಾಲ್ಕನೆಯ ಪಾದಗಳ ಕೊನೆಯ ಅಕ್ಷರವು ಕಡ್ಡಾಯವಾಗಿ ಗುರು ಆಗಿರಬೇಕು. ಆರು

ಮತ್ತು ಹದಿನಾಲ್ಕನೆಯ ಸ್ಥಾನದ ಗಣವು ಮಧ್ಯ ಗುರುವುಳ್ಳದಾಗಲಿ 'ಜ' ಗಣ ಅಥವಾ ಸರ್ವಲಘು ಗಣವಾಗಲಿ ಆಗಿರಬೇಕು. ಮೊದಲಿನ ಹ್ರಸ್ವದ ಮುಂದೆ ಯತಿ ಇರುತ್ತದೆ.

ಈ ಮೇಲಿನ ಲಕ್ಷಣಕ್ಕೆ ಅನುಗುನವಾಗಿ ಉಮ್ರಾಣಿ ಶಾಸನದಲ್ಲಿ ಬಳಕೆಯಾದ ಒಂದು ಕಂದ ಪದ್ಯವನ್ನು ಉದಾಹರಣೆಯಾಗಿ ತೆಗೆದುಕೊಳ್ಳಲಾಗಿದೆ.

ಭೂದಾನಂ ಗೃಹದಾನಂ
ಗೋದಾನಂ ವಸ್ತ್ರವಿತ್ತ ಭೋಜನ ಕನ್ಯಾಂ
ಭೋದಾನಮಿವಂ ಮಾಳ್ಪಂ
ಬಾದೇ ಶ್ರೀಕಲ್ಲಿಸೆಟ್ಟಿ ವಿಪ್ರರ್ಗ್ಗೆಲ್ಲಂ [೧೩೯]

ಕೊಕಟನೂರು ಶಾಸನದಲ್ಲಿ ಬಳಕೆಯಾಗಿರುವ ಕಂದ ಪದ್ಯವನ್ನು ಛಂದಸ್ಸಿನ ಹಿನ್ನಲೆಯಲ್ಲಿಒಂದು ಪದ್ಯ ಉದಾಹರಣೆಯಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ. ಅದು ಈ ಕೆಳಗಿನಂತಿದೆ.

ಶಾಲೆಯ ಪರಿಸೂತ್ರದೊಳ್
ತ್ಮಾಲಯಮಂ ಮಾಡಿಕೊಳ್ವದಲ್ಲದೆ ಪೆರತೊ
ನ್ನಾಲಯದೊಳಿರ್ಪ್ಪವಂ ಪ್ರತಿ
ಕೂಲಂ ಲೋಲಂ ನಿವಿಷ್ಟ ನಲ್ಲಂ ದುಷ್ಟಂ [೧೪೦]

**ಲಕ್ಷಣ** :ಮೊದಲನೆ ಮತ್ತು ಮೂರನೆಯ ಪಾದಗಳಲ್ಲಿ ನಾಲ್ಕು ಮಾತ್ರೆಯ ಮೂರು ಗಣ ಬಂದಿದೆ. ಎರಡನೇ ಮತ್ತು ನಾಲ್ಕನೇ ಪಾದಗಳಲ್ಲಿ ನಾಲ್ಕು ಮಾತ್ರೆ ಐದು ಗಣಗಳಿವೆ. ಮೂರು, ಐದು ಮತ್ತು ಏಳನೆಯ ವಿಷಯ ಸ್ಥಾನದಲ್ಲಿ 'ಜ' ಗಣ ಬಂದಿರುವದಿಲ್ಲ. ಎರಡು ಮತ್ತು ನಾಲ್ಕನೆಯ ಪದಗಳ ಕೊನೆಯಲ್ಲಿ ಅಕ್ಷರ ಕಡ್ಡಾಯವಾಗಿ ಗುರು ಆಗಿದೆ. ಆರು ಮತ್ತು ಹದಿನಾಲ್ಕನೆಯ ಸ್ಥಾನ ಗಣವು 'ಜ' ಗಣ ಅಥವಾ ಸರ್ವ ಲಘು ಆಗಿರಬೇಕೆಂಬ ನಿಯಮ, ಆದರೆ ಇಲ್ಲಿ ಸರಿಯಾಗಿ 'ಜ' ಗಣ ಬಂದಿದೆ.

ಅಥಣಿ ಹಾಗೂ ಜತ್ತ ತಾಲೂಕಿನ ಶಾಸನಗಳನ್ನು ಆಧರಿಸಿ ಶಾಸನಗಳಲ್ಲಿ ಛಂದಸ್ಸನ್ನು ಅಧ್ಯಯನ ಮಾಡಲಾಗಿದೆ.

**ಕೊನೆ ಟಿಪ್ಪಣಿಗಳು:**


೧. ಶರ್ಮಾ. ಆರ್. ಎಸ್.; ಶುದ್ರಾಜ್ ಇನ್. ಎನ್‌ಸಿಯಂಟ್ ಇಂಡಿಯಾ. ಪು. ೨೮.

೨. ಚಿದಾನಂದಮೂರ್ತಿ ಎಂ.; ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೪೩೧, ೧೯೭೦.

೩. ಕೊಪ್ಪಾ ಎಸ್. ಕೆ.; ತರ್ದವಾಡಿ ನಾಡು: ಒಂದು ಅಧ್ಯಯನ. ಪು. ೧೫೨, ೧೯೯೦.

೪. ಅದೇ.

೫. ಪಂಪಭಾರತದ, ೧೪-೪೮, 'ಜಾತಿತಿಯೊಳೆಲ್ಲ ಮುತ್ತಮದ ಜಾತಿಯ ವೀಪ್ರಕುಲಂಗೆ.

೬. ಚಿದಾನಂದಮೂರ್ತಿ ಎಂ.; ಕನ್ನಡ ಶಾಸನಗಳು ಸಾಂಸ್ಕೃತಿಕ ಅಧ್ಯಯನ, ಪು. ೨೧೩, ೧೯೭೦.

೭. ಗುರುವ. ಆರ್. ಎನ್.; ಕರ್ನಾಟಕ ಭಾರತಿ ಸಂಪುತ -೪, ಸಂಚಿಕೆ -೧, ೧೯೭೧ ರಲ್ಲಿಯ 'ಬಿಜ್ಜಲದೇವ ಮತ್ತು ಸೋಯಿದೇವ ಇವರ ಉಮ್ರಾಣಿ ಶಾಸನ'

೮. ಕ. ಇ. ೨, ನಂ. ತೆಲಸಂಗ ಶಾಸನ, (ತಾ. ಅಥಣಿ) ಕ್ರಿ. ಶ. ೧೧೪೩.

೯. ಅದೇ, ನಂ. ೨೪, ರಾಮತೀರ್ಥ ಶಾಸನ, (ತಾ. ಅಥಣಿ), ಕ್ರಿ. ಶ. ೧೧೬೭.

೧೦. ಜೆ. ಇ. ಎಸ್. ಆಯ್. ವ್ಹಾ. ೨೪, (ಬಾಡಗಿ ಶಾಸನ), ೧೯೯೬.

೧೧. ಕ. ಇ. ೨, ನಂ. ೨೬, ಉಮ್ರಾಣಿ ಶಾಸನ, (ತಾ. ಆತ್), ಕ್ರಿ. ಶ. ೧೧೬.

೧೨. ಜೆ. ಇ. ಎಸ್. ಆಯ್. ವ್ಹಾ. ೨೪, ಬಾಡಗಿ ಶಾಸನ, (ತಾ. ಅಥಣಿ), ೧೯೯೬.

೧೩. ಕೊಪ್ಪಾ ಎಸ್. ಕೆ. ತರ್ದವಾಡಿ ನಾಡು: ಒಂದು ಅಧ್ಯಯನ, ಪು. ೧೫೩, ೧೯೯೦.

೧೪. ಡಾ.ಬಿ.ಆರ್.ರಾಠೋಡ ಮತ್ತು ಶ್ರೀಮತಿ. ಹನುಮಾಕ್ಷಿ ಗೋಗಿ ಅವರು ಕ್ಷೇತ್ರಕಾರ್ಯ ಕೈಗೊಂಡಾಗ ಓದಿದ ಪತ್ಯದಿಂದ.

೧೫. ಕೊಪ್ಪಾ ಎಸ್. ಕೆ. ತರ್ದವಾಡಿ ನಾಡು: ಒಂದು ಅಧ್ಯಯನ, ಪು. ೧೧೩, ೧೯೯೦.

೧೬. ಗುರವ. ಆರ್. ಎನ್. ಅವರ ಲೇಖನ, ಕರ್ನಾಟಕ ಭಾರತಿ, ಸಂ. ೩, ಸಂ, ೨, ೧೯೭೦.(ಚಾಳಿಕ್ಯ ಚ್ರವರ್ತಿ ತ್ರೈಲೋಕ್ಯಮಲ್ಲದೇವನ ಕೊಕಟನೂರು ಶಾಸನ)

೧೭. ಕ. ಇ. ೨, ನಂ ೧೮, ತೆಲಸಂಗ, ತಾ. ಅಥಣಿ.

೧೮. ಅದೇ, ನಂ. ೩೮ ಕೊಕಟನೂರು, ತಾ. ಅಥಣಿ.

19. Journal of Karnataka University Social Science, Vol.1965 Muragundi plates of Somesvara IV, R.N.Gurav.

೨೦. ಜೆ. ಬಿ. ಬಿ. ಆರ್. ವ್ಹಾ. ೧೨, ಯಂಕ್ಕಂಚಿ, ತಾ. ಅಥಣಿ, ೧೨೨೫.

೨೧. ಮಹಾರಾಷ್ಟ್ರದ ಕನ್ನಡ ಶಾಸನಗಳು; ಸಂ. ೬, ನಂ. ೧೦೯, ಉಮ್ರಾಣಿ ಶಾಸನ, ತಾ. ಜತ್.

೨೨. ಡಾ.ಬಿ.ಆರ್.ರಾಠೋಡ ಮತ್ತು ಶ್ರೀಮತಿ. ಹನುಮಾಕ್ಷಿ ಗೋಗಿ ಅವರು ಕ್ಷೇತ್ರಕಾರ್ಯಕೈಗೊಂಡಾಗ ಓದಿದ ಪಠ್ಯದಿಂದ.

೨೩. ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ, ಸಂ. ೬೫, ಸಂ.೨, ಕಲಚುರಿ ಪೆರ್ಮ್ಮಾಡಿದೇವನ ಕೊಕಟನೂರು ಶಾಸನ, ಕ್ರಿ. ಶ. ೧೧೨೬, (ಆರ್. ಎನ್. ಗುರವ)

೨೪. ಬಳಗೇರಿ ಶಾಸನ, ತಾ. ಅಥಣಿ, (ಅಪ್ರಕಟಿತ)

೨೫. ಎಸ್. ಆಯ್. ಆಯ್. ನಂ. ೩೬೧, ತುಂಗಳ, ತಾ. ಜಮಖಂಡಿ.

೨೬. ಜೆ. ಈ. ಎಸ್. ಆಯ್. ವ್ಯಾ. ೧೯, ೧೯೯೧, ಅಡಹಳ್ಳಿ, ತಾ. ಅಥಣಿ.

೨೭. ಕೊಪ್ಪಾ. ಎಸ್. ಕೆ. ತರ್ದವಾಡಿ ನಾಡು : ಒಂದು ಅಧ್ಯಯನ, ಪು. ೧೫೭, ೧೯೯೦.

೨೮. ಜೆ. ಈ. ಎಸ್. ಆಯ್. ವ್ಯಾ. ೧೯. ೧೯೯೩, ಅಡಹಳ್ಳಿ, ತಾ. ಅಥಣಿ.

೨೯. ಎಸ್. ಆಯ್. ಅಯ್. ೨೦, ನಂ. ೩೬೧, ತುಂಗಳ, ತಾ. ಜ. ಮಖಣಿ.

೩೦. ಬಿಳೂರು (ತಾ. ಅಥಣಿ) ಅಪ್ರಕಟಿತ ಶಾಸನ. ನಾನು ಮತ್ತು ಶ್ರೀಮತಿ. ಹನುಮಾಕ್ಷಿ ಗೋಗಿ ಅವರು ಕ್ಷೇತ್ರಕಾರ್ಯ ಕೈಗೊಂಡಾಗ ಓದಿದ ಪಠ್ಯದಿಂದ.

೩೧. ಗಟಪಣದಿ. ಎಸ್. ಜಿ. ಎಂಟು ಹಿಟ್ಟು, ಕರ್ನಾಟಕ ಭಾರತಿ, ಸಂ. ೨, ಸಂ. ೨೨.

೩೨. ಜೆ. ಬಿ. ಬೆ. ಆರ್. ವ್ಯ. ೧೨, ಯಂಕ್ಕಂಚಿ ಶಾಸನ, ತಾ. ಅಥಣಿ, ೧೨೨೫.

೩೩. ಕೊಪ್ಪಾ ಎಸ್. ಕೆ.; ತರ್ದವಾಡಿ ನಾಡು : ಒಂದು ಅಧ್ಯಯನ, ಪು. ೧೫೮, ೧೯೯೦.



೩೪. ಅಪ್ರಕಟಿತ ಶಾಸನಪಠ್ಯದಿಂದ, ಬಳಗೇರಿ, ತಾ. ಅಥಣಿ.

೩೫. ಜೆ. ಬಿ. ಬಿ. ಆರ್. ವ್ಯಾ. ೧೨, ಯಂಕ್ಕಂಚಿ, ಶಾಸನ, ತಾ. ಅಥಣಿ, ೧೨೨೫.

೩೬. ಕ. ಇ. ೨, ನಂ. ೨೪, ಕೊಕಟನೂರು ಶಾಸನ, ತಾ. ಅಥಣಿ.

೩೭. ಜೆ. ಇ. ಎಸ್. ಆಯ್. ವ್ಯ. ೧೯, ೧೯೯೩, ಅಡಹಳ್ಳಿ, ತಾ. ಅಥಣಿ.

೩೮. ಕೊಪ್ಪಾ ಎಸ್. ಕೆ.; ತದ್ವಾಡಿ ನಾಡು : ಒಂದು ಅದ್ಯಯನ, ಪು. ೧೫೯, ೧೯೯೦.

೩೯. ಕ. ಇ. ೨, ನಂ. ೨೪, ಕೊಕಟನೂರು ಶಾಸನ, ತಾ. ಅಥಣಿ.

೪೦. ಅದೇ, ನಂ. ೧೮, ತೆಲಸಂಗ, ಅದೇ.

೪೧. ಅದೇ, ನಂ. ೨೫, ಉಮ್ರಾಣಿ, ೧೧೬೭, ತಾ. ಜತ್,

೪೨. ೧೦೨೨ರಲ್ಲಿ ಎರಡನೆ ಜಯಸಿಂಹನ ಕೊಟಲಗಿ ಶಾಸನ

೪೩. ಶಂಕರರಾಮ ಚ. ನ., ಸಮಾಜಶಾಸ್ತ್ರ – ಸಂಪುಟ ೧, ಪು. ೨೯, ೨೦೦೩.

೪೪. ದೇಸಾಯಿ. ಪಿ. ಬಿ. ಕರ್ನಾಟಕದ ಕಲಚೂರಿಗಳು, ಪು. ೪೦, ೧೯೮೩.

೪೫. ಭೋಜರಾಜ. ಬ. ಪಾಟೀಲ, ನಾಗರಖಂಡ–೭೦, ಒಂದು ಅಧ್ಯಯನ ಪು. ೧೬೧, ೧೯೯೧.

೪೬. ಗುರವ. ಆರ್. ಎನ್.; ಚಾಳುಕ್ಯ ಚಕ್ರವರ್ತಿ ತ್ರೈಳೋಕ್ಯ ಮಲ್ಲದೇವನ, ಕೊಕಟನೂರು, ಶಾಸನ, ೧೦೫೦, ಕ. ಬಾ. ಸಂ. ೩, ೧೯೭೦.

೪೭. ಕ. ಇ. ೨, ನಂ. ೧೪, ಉಮ್ರಾಣಿ, ತಾ. ಜತ್.

೪೮. ಅದೇ, ನಂ. ೨೬, ಉಮ್ರಾಣಿ, ತಾ. ಜತ್.

೪೯. ಅದೇ, ನಂ. ೧೮, ತೆಲಸಂಗ, ತಾ. ಅಥಣಿ.

೫೦. ಚೆನ್ನಕ್ಕ ಎಲಿಗಾರ, ಪ್ರಾಚೀನ ಕರ್ನಾಟಕದ ರಾಣಿಯರು, ಪು. ೬೦.

೫೧. ಎ. ಆರ್. ಎಸ್. ಆಯ್. ಈ. ೧೯೪೦-೪೧, ವಳಸಂಗ.

೫೨. ಕೊಪ್ಪಾ ಎಸ್. ಕೆ.; ತದ್ವಾಡಿ ನಾಡು : ಒಂದು ಅಧ್ಯಯನ, ಪು. ೧೭೧-೭೨, ೧೯೯೦.

೫೩. ಕ. ಇ. ೨, ನಂ. ೪೨, ಕೊಕಟನೂರು, ತಾ. ಅಥಣಿ, ೧೩೦೬.

೫೪. ಸೌ. ಇ. ಇ. ೨೦. ನಂ. ೩೬೧, ತುಂಗಳ, ತಾ. ಜಮಖಂಡಿ.

೫೫. ಕೊಪ್ಪಾ ಎಸ್. ಕೆ.; ತರ್ದವಾಡಿ ನಾಡು : ಒಂದು ಅಧ್ಯಯನ, ಪು. ೧೭೩, ೧೯೯೦.

೫೬. ಕ. ಇ. ೨, ನಂ. ೧೫, ತೆಲಸಂಗ, ೧೧೨೨,, ತಾ. ಅಥಣಿ.

೫೭. ಡಾ.ಬಿ.ಆರ್.ರಾಠೋಡ ಮತ್ತು ಶ್ರೀಮತಿ. ಹನುಮಾಕ್ಷಿ ಗೋಗಿ ಅವರು ಕ್ಷೇತ್ರಕಾರ್ಯ ಕೈಗೊಂಡಾಗ ಓದಿದ ಪಠ್ಯದಿಂದ. ಬಳಗೇರಿ ಶಾಸನ, ತಾ. ಅಥಣಿ.

೫೮. ಆರ್. ಎನ್. ಗುರವ, ಕರ್ನಾಟಕ ಭಾರತಿ, ಸಂ. ೨, ಸಂ.೨, ೧೯೭೦, ಚಾಳುಕ್ಯ ಚಕ್ರವರ್ತಿ ತ್ರೈಲೋಕ್ಯಮಲ್ಲನ ಶಾಸನ.

೫೯. ಕೊಪ್ಪಾ ಎಸ್. ಕೆ.; ತರ್ದವಾಡಿ ನಾಡು : ಒಂದು ಅಧ್ಯಯನ, ಪು. ೧೭೪, ೧೯೯೦.

೬೦. ಗುರವ. ಆರ್. ಎನ್.; ಕರ್ನಾಟಕ ಭಾರತಿ, ಸಂ. ೨, ಸಂ.೨, ೧೯೭೦, ಉಮ್ರಾಣಿ ಶಾಸನ, ತಾ. ಜತ್.

೬೧. ಕ. ಇ. ೨, ನಂ. ೨೧, ತೆಲಸಂಗ, ೧೧೪೭, ತಾ. ಅಥಣಿ.

೬೨. ಅದೇ.

೬೩. ಚಿದಾನಂದಮೂರ್ತಿ. ಎಂ. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೧೯೭೦.

೬೪. ಕೊಪ್ಪಾ ಎಸ್. ಕೆ.; ತರ್ದವಾಡಿ ನಾಡು : ಒಂದು ಅಧ್ಯಯನ, ಪು. ೧೭೬, ೧೯೯೦.

೬೫. ಗುರವ ಆರ್. ಎನ್.; ಕರ್ನಾಟಕ ಭಾರತಿ, ಸಂ. ೩, ಸಂ.೨, ೧೯೭೦, ಕೊಕಟನೂರ ಶಾಸನ.

೬೬. ಅದೇ.

೬೭. ಕ. ಇ. ವ್ಯಾ- ೨, ನಂ. ೧೪, ಉಮ್ರಾಣಿ ಶಾಸನ, ತಾ. ಜತ್.

೬೮. ಚಿದಾನಂದಮೂರ್ತಿ. ಎಂ.; ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೨೦೯, ೧೯೭೦.

೬೯. ಗುರವ. ಆರ್, ಎನ್.; ಕರ್ನಾಟಕ ಭಾರತಿ, ಸಂ. ೩, ಸಂ. ೨, ೧೯೭೦.

೭೦. ಕ. ಇ. ೨, ನಂ. ೨೧, ತೆಲಸಂಗ, ತಾ. ಅಥಣಿ.

೭೧. ಚಿದಾನಂದಮೂರ್ತಿ. ಎಂ.; ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೨೧೬, ೧೯೭೦.

೭೨. ಮಹಾರಾಷ್ಟ್ರದ ಕನ್ನಡ ಶಾಸನಗಳು, ಸಂ. ೬, ನಂ. ೧೦೯, ಉಮ್ರಾಣಿ ಶಾಸನ, ತಾ. ಜತ್.

೭೩. ಕೊಪ್ಪಾ. ಎಸ್. ಕೆ.; ತರ್ದವಾಡಿ ನಾಡು ಒಂದು ಅಧ್ಯಯನ, ಪು. ೧೮೦, ೧೯೯೦.

೭೪. ಮಹಾರಾಷ್ಟ್ರದ ಕನ್ನಡ ಶಾಸನಗಳು, ಸಂ. ೬, ನಂ.೧೦೯, ಉಮ್ರಾಣಿ ಶಾಸನ, ತಾ. ಜತ್.

೭೫. JESI-Vol.೧೯ ಬಾಡಗಿ, ಅಥಣಿ.

೭೬. ಚಿದಾನಂದಮೂರ್ತಿ. ಎಂ.; ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೨೨೨, ೧೯೭೦.

೭೭. ಕೊಪ್ಪಾ. ಎಸ್. ಕೆ.; ತರ್ದವಾಡಿ ನಾಡು ಒಂದು ಅಧ್ಯಯನ, ಪು. ೧೮೧, ೧೯೯೦.

೭೮. JESI-Vol.೧೯ ಬಾಡಗಿ, ತಾ. ಅಥಣಿ.

೭೯. ಗುರವ. ಆರ್, ಎನ್.; ಕರ್ನಾಟಕ ಭಾರತಿ, ಸಂ. ೩, ಸಂ.೨, ೧೯೭೦, ಕೊಕಟನೂರು ಶಾಸನ. ತಾ. ಅಥಣಿ.

೮೦. ಕೊಪ್ಪಾ. ಎಸ್. ಕೆ.; ತರ್ದ್ವಾಡಿ ನಾಡು ಒಂದು ಅಧ್ಯಯನ, ಮ. ೧೮೨, ೧೯೯೦.

೮೧. ಕ. ಇ. ನಂ. ೧೪, ಉಮ್ರಾಣಿ, ತಾ. ಜತ್.

೮೨. ARSIE,1940–೪೧, ವಳಸಂಗ, ತಾ. ಜತ್.

೮೩. ಉಪಾಧ್ಯೆ. ಜೆ. ಎನ್.; ಗೋದಾವರಿವರಂ ಇರ್ದ ಕನ್ನಡನಾಡು, ಪು. ೧೧೨, ೨೦೦೨.

೮೪. ಕೊಪ್ಪಾ. ಎಸ್. ಕೆ.; ತರ್ದವಾಡಿ ನಾಡು ಒಂದು ಅಧ್ಯಯನ, ಪು. ೨೬೧, ೧೯೯೦.

೮೫. ಅದೇ. ಪು.

೮೬. ARSIE, ೧೯೪೦–೪೧, ಬಳ್ಳಿಗೇರಿ ಶಾಸನ, ತಾ. ಅಥಣಿ.

೮೭. ಗುರವ. ಆಯ್, ಎನ್.; ಕರ್ನಾಟಕ ಬಾರತಿ, ಸಂ.೪, ಸಂ.೧, ೧೯೭೧, ಉಮ್ರಾಣಿ ಶಾಸನ.

೮೮. ಡಾ.ಬಿ.ಆರ್.ರಾಠೋಡ ಮತ್ತು ಶ್ರೀಮತಿ. ಹನುಮಾಕ್ಷಿ ಗೋಗಿಯವರು ಪ್ರತಿ ಮಾಡಿದ ಬಳ್ಳಿಗೇರಿ ಅಪ್ರಕಟಿತ ಶಾಸನ ಪತ್ರದಿಂದ.

೮೯. ಡಾ.ಬಿ.ಆರ್.ರಾಠೋಡ ಕ್ಷೇತ್ರಕಾರ್ಯ ಕೈಗೊಂಡಾಗ ಜೈನ ಶಿಲ್ಪ ಗಮನಿಸಿ ಅದರ ಛಾಯಾಚಿತ್ರ ತೆಗೆದುಕೊಂಡ ಹಿನ್ನಲೆಯಲ್ಲಿ ತಿಳಿದ ಸಂಗತಿ.

೯೦. ಕೊಪ್ಪಾ. ಎಸ್. ಕೆ.; ತದ್ವಾಡಿ ನಾಡು ಒಂದು ಅಧ್ಯಯನ, ಪು. ೨೬೪, ೧೯೯೦.

೯೧. ಡಾ.ಬಿ.ಆರ್.ರಾಠೋಡ ಮತ್ತು ಶ್ರೀಮತಿ. ಹನುಮಾಕ್ಷಿ ಗೋಗಿಯವರು ಕ್ಷೇತ್ರಕಾರ್ಯ ಕೈಗೊಂಡಾಗ ಪ್ರತಿ ಮಾಡಿದ ಬಳ್ಳಿಗೇರಿ ಅಪ್ರಕಟಿತ ಶಾಸನ ಪತ್ರದಿಂದ.

೯೨. ಕಲಬುರ್ಗಿ. ಎಂ. ಎಂ.; ಮಾರ್ಗ ಮೂರು.

೯೩. ಡಾ.ಬಿ.ಆರ್.ರಾಠೋಡ ಮತ್ತು ಶ್ರೀಮತಿ. ಹನುಮಾಕ್ಷಿ ಗೋಗಿಯವರು ಕ್ಷೇತ್ರಕಾರ್ಯ ಕೈಗೊಂಡಾಗ ಪ್ರತಿ ಮಾಡಿದ ಬಳ್ಳಿಗೇರಿ ಅಪ್ರಕಟಿತ ಶಾಸನ ಪತ್ರದಿಂದ.

೯೪. ಕಲಬುರ್ಗಿ. ಎಂ. ಎಂ.; ಮಾರ್ಗ ಮೂರು.

೯೫. ಕಲಬುರ್ಗಿ. ಎಂ. ಎಂ.; ಮಾರ್ಗ ಮೂರು.

೯೬. ಡಾ.ಬಿ.ಆರ್.ರಾಠೋಡ ಮತ್ತು ಶ್ರೀಮತಿ. ಹನುಮಾಕ್ಷಿ ಗೋಗಿಯವರು ಕ್ಷೇತ್ರಕಾರ್ಯ ಕೈಗೊಂಡಾಗ ಪ್ರತಿ ಮಾಡಿದ ಬಳ್ಳಿಗೇರಿ ಅಪ್ರಕಟಿತ ಶಾಸನ ಪತ್ರದಿಂದ.

೯೭. ಕೊಪ್ಪಾ. ಎಸ್. ಕೆ.; ತರ್ದವಾಡಿ ನಾಡು ಒಂದು ಅಧ್ಯಯನ, ಪು. ೨೬೮, ೧೯೯೦.

೯೮. ಕ. ಇ. ೨, ನಂ. ೩೮, ಕೊಕಟನೂರು, ತಾ. ಅಥಣಿ.

೯೯. ಜೆ. ಕೆ. ಯು. ಸೋ. ಸೈ. ವ್ಯಾ. ೧, ಮುರಗುಂಡಿ ತಾಮ್ರಪಟು, ತಾ. ಅಥಣಿ.

೧೦೦. ARSIE, ೧೯೪೦-೪೧,

೧೦೧. AREASI – ಬಾಡಗಿ ಶಾಸನ – ಕಲಚುರಿ ಬಿಜ್ಜಳ, ೧೫೬೬

೧೦೨. ARSIE, ೧೯೪೦-೪೧, ವಳಸಂಗ, ತಾ. ಜತ್.

೧೦೩. ವಿರೂಪಾಕ್ಷ ಕುಲಕರ್ಣಿ, ಕಪಾಲಿಕರು ಮತ್ತು ಕಾಳಾಮುಖರು, ಪು. ೧-೨, ೨೦೦೫.

೧೦೪. ಕೊಪ್ಪಾ. ಎಸ್. ಕೆ.; ತರ್ದವಾಡಿ ನಾಡು ಒಂದು ಅಧ್ಯಯನ, ಪು. ೨೭೦, ೧೯೯೦.

೧೦೫. ಚಿದಾನಂದಮೂರ್ತಿ. ಎಂ.; ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೧೩೪, ೧೯೭೦.

೧೦೬. ಗುರವ. ಆರ್, ಎನ್.; ಕೊಕಟನೂರು ಶಾಸನ, ಕ್ರಿ. ಶ. ೧೦೫೦, ಕರ್ನಾಟಕ ಭಾರತಿ, ಸಂ.೪,ಸಂ.೨.

೧೦೭. ಕ. ಇ. ೨, ನಂ. ೧೩, ರಾಮತೀರ್ಥ, ತಾ. ಅಥಣಿ, ೧೧೧೫.

೧೦೮. ಅದೇ, ನಂ. ೧೫, ತೆಲಸಂಗ, ತಾ. ಅಥಣಿ, ೧೧೧೨.

೧೦೯. ಅದೇ. ನಂ. ೨೧. ತೆಲಸಂಗ, ತಾ. ಅಥಣಿ, ೧೧೪೭.

೧೧೦. ಅದೇ. ನಂ. ೩೮. ಕೊಕಟನೂರು, ೧೨೩೫. ತಾ. ಅಥಣಿ

೧೧೧. ಕಲಬುರ್ಗಿ. ಎಂ. ಎಂ.; ಮಹಾರಾಷ್ಟ್ರದ ಕನ್ನಡ ಶಾಸನಗಳು, ಪು. ೪೪, ೧೯೮೭.

೧೧೨. ಕ. ಇ. ೨, ನಂ. ೧೪, ಉಮ್ರಾಣಿ ಶಾಸನ, ತಾ. ಜತ್.

೧೧೩. ಅದೇ. ನಂ. ೧೩, ರಾಮತೀರ್ಥ ಶಾಸನ, ತಾ. ಅಥಣಿ, ೧೧೧೫.

೧೧೪. ಅದೇ. ನಂ. ೧೪, ಉಮ್ರಾಣಿ ಶಾಸನ. ತಾ. ಜತ್.

೧೧೫. ಅದೇ.

೧೧೬. ಅದೇ. ನಂ. ೨೫. ಕೊಕಟನೂರು, ತಾ. ಅಥಣಿ.

೧೧೭. ಚಿದಾನಂದಮೂರ್ತಿ. ಎಂ.; ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೨೦೩, ೧೯೩೦.

೧೧೮. ಗುರವ. ಆರ್. ಎನ್.; 'ಕರ್ನಾಟಕ ಭಾರತಿ' ಸಂ. ೩, ಸಂ. ೨, ೧೯೭೦, (ಉಮ್ರಾಣಿ ಶಾಸನ)

೧೧೯. ಅದೇ.

೧೨೦. ಬಾಳಾಸಾಹೇಬ ಲೋಕಾಪುರ, ಕನ್ನಡದ ಕೆಲವು ಜೈನ ಶಾಸನ ಕವಿಗಳು, ೨೦೦೪.

೧೨೧. ಗುರವ. ಆರ್. ಎನ್.; ಕ. ಭಾ. ಸಂ.೩. ಸಂ.೨, ಕೊಕಟನೂರು ಶಾಸನ. ತಾ. ಅಥಣಿ.

೧೨೨. ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂ. ೯, ಚೊಳಜಂಬಗಿ ೨೭, ಕನ್ನಡ ವಿಶ್ವವಿದ್ಯಾಲಯ. ಹಂಪಿ.

೧೨೩. ಕ. ಇ. ನಂ. ೨೪. ರಾಮತೀರ್ಥ, ತಾ. ಅಥಣಿ, ೧೧೬೭.

೧೨೪. ಅದೇ.

೧೨೫. ಗುರವ. ಆರ್. ಎನ್.: ಮುರಗುಂಡಿ ಶಾಸನ, ಕರ್ನಾಟಕ ಯುನಿರ್ವಸಿಟಿ, ಸೋಸಿಯಲ್ ಸಾಯಿನ್ಸ್, ವ್ಹಾ. ೧.

೧೨೬. ಅದೇ.

೧೨೭. ಕಲಬುರ್ಗಿ. ಎಂ. ಎಂ.; ಮಹಾರಾಷ್ಟ್ರದ ಕನ್ನಡ ಶಾಸನಗಳು, ಪು. ೫೫, ೧೯೮೩.

೧೨೮. J.E.S.I.Vol ೨೪. ೧೯೯೩, ಸಂಖ ಶಾಸನ. ತಾ. ಆತ್

೧೨೯. ಬರಗೂರ ರಾಮಚಂದ್ರಪ್ಪ – ಸಂ. ಕರ್ನಾಟಕ ಸಂಗಾತಿ (ಚನ್ನಕ್ಕ ಪಾವಟೆ ಅವರ ಲೇಖನ) ಪು. ೧೯೩, ೨೦೦೨

೧೩೦. ಗುರವ ಆರ್. ಎನ್.; ಕರ್ನಾಟಕ ಭಾರತಿ ಸಂ. – ೩. ಸಂಚಿಕೆ ೨, ೧೯೭೦, (ಕೊಕಟನೂರು ಶಾಸನ, ತಾ. ಅಥಣಿ)

೧೩೧. ಅದೇ.

೧೩೨. ಅದೇ.

೧೩೩. ಅದೇ, ಸಂಪುಟ – ೪, ಉಮ್ರಾಣಿ ಶಾಸನ, ತಾ. ಜತ್. ೧೧೬೫

೧೩೪. ಅದೇ.

೧೩೫. ಅದೇ.

೧೩೬. ಗುರವ ಆರ್. ಎನ್.; 'ಉಮ್ರಾಣಿ ಶಾಸನ' ಕ್ರಿ. ಶ. ೧೧೬೫ (ತಾ. ಜತ್) ಕರ್ನಾಟಕ ಭಾರತಿ ಸಂಪುಟ – ೪, ಸಂಚಿಕೆ ೧,೧೯೭೦.

೧೩೭. ಅದೇ, ಕೊಕಟನೂರು ಶಾಸನ ಕ್ರಿ. ಶ. ೧೦೫೦ (ತಾ. ಅಥಣಿ) ಕರ್ನಾಟಕ ಭಾರತಿ, ಸಂಪುತ – ೩.ಸಂ. ೨, ೧೯೭೦

೧೩೮. ಜಯರಾಮ ವಿ. : ಪ್ರಾಚೀನ ಕನ್ನಡ ಶಾಸನಗಳ ಸಾಹಿತ್ಯ ಅಧ್ಯಯನ, ಪು. ೬೬, ೨೦೦೮.

೧೩೯. ಗುರವ ಆರ್. ಎನ್.; ಕೊಕಟನೂರು ಶಾಸನ ಕ್ರಿ. ಶ. ೧೦೫೦ (ತಾ. ಅಥಣಿ) ಕರ್ನಾಟಕ ಭಾರತಿ,

೧೪೦. ಸಂಪುಟ – ೩, ಸಂ. ೨, ೧೯೭೦.

೧೪೧. ಅದೇ.

# ಅಧ್ಯಾಯ-೫

## ಸಮಾರೋಪ :

ನಮ್ಮ ದೇಶದ ಸಂಸ್ಕೃತಿ ನಿರ್ಮಾಣ ಹಾಗೂ ಇತಿಹಾಸ ರಚನೆಯಲ್ಲಿ ಶಾಸನ ಸಾಮಗ್ರಿ ಜೀವನಾಡಿ ಇದ್ದ ಹಾಗೆ ದೇಶದ ಪ್ರಾಚೀನ ಬದುಕಿನ ಸಂಪೂರ್ಣ ಸಂವೇದನೆಗಳ ಪ್ರಾಮಾಣಿಕ ಧ್ವನಿಗಳಾಗಿವೆ. ನಮ್ಮ ನಾಡಿನ ಜನ ಜೀವನವು ಶಾಸನಗಳಲ್ಲಿ ಅಭಿವ್ಯಕ್ತಿಗೊಂಡಂತೆ ಬೇರೆ ಇನ್ನಾವ ಮೂಲಗಳಲ್ಲಿ ವ್ಯಕ್ತವಾಗಿಲ್ಲ. ಆದ್ದರಿಂದ ಒಂದು ನಾಡಿನ ಇತಿಹಾಸ ಸಂಸ್ಕೃತಿಯ ರಚನೆಗೆ ಶಾಸನಗಳಂತಹ ಮೂಲ ಆಕರಗಳ ಸಹಾಯ ಪಡೆದುಕೊಳ್ಳುವುದು ಇಲ್ಲಿ ಅವಶ್ಯಕವಾಗಿದೆ.

ಸಂಶೋಧನಾ ರಂಗ ಇತ್ತಿಚಿಗೆ ಹೊಸ ಹೊಸ ಅಂಶಗಳನ್ನು ಮೈಗೂಡಿಸಿಕೊಂಡು ಮುನ್ನಡೆಯುತ್ತಲಿದೆ. ಇಡಿ ದೇಶದ ಚರಿತ್ರೆ ಹೆಚ್ಚು ನೈಜವಾಗಬೇಕಾದರೆ ಅದು ತಲಸ್ಪರ್ಷಿಯಾಗಬೇಕು. ಸಂಶೋಧನೆಯನ್ನುವುದು ಕುತೂಹಲದಲ್ಲಿ ಹುಟ್ಟಿ ಸತ್ಯದಲ್ಲಿ ಪರ್ಯಾವಸಾನವಾಗುವುದಾಗಿದೆ. ತಲಸ್ಪರ್ಷಿಯೆಂದರೆ ಅದು ಹಳ್ಳಿ ಹಳ್ಳಿ ಚರಿತ್ರೆಯಿಂದ ಮೇಲೆರುತ್ತಾ ಹೋಗಬೇಕು. ಇದು ಒಂದು ರೀತಿ ಸಾಂಸ್ಕೃತಿಕ ಚರಿತ್ರೆಯ ನೈಜತೆಯನ್ನು ತಿಳಿದುಕೋಳ್ಳುವ ಪ್ರಯತ್ನವೆಂದರೆ ತಪ್ಪಾಗಲಾರದು.

ಇಂತಹ ಸಂಶೋಧನೆಗಳು ಕರ್ನಾಟಕದಲ್ಲಿ ಶಾಸನ, ಹಸ್ತಪ್ರತಿ, ಭಾಷೆ, ಜನಪದ ಶೋಧ, ಸಂಗ್ರಹ ವಿಶ್ಲೇಷಣೆ ಮತ್ತು ಪ್ರಕಟಣೆಗಳ ಮೂಲಕ ಪ್ರವಹಿಸಿವೆ ಅವುಗಳಿಂದ ಕರ್ನಾಟಕ ಇತಿಹಾಸ, ಸಾಹಿತ್ಯ ಮತ್ತು ಸಂಸ್ಕೃತಿಗಳ ಸಮಗ್ರ ದರ್ಶನವನ್ನು ಮೂಡಿಸುವ ಪ್ರಯತ್ನ ನಡೆದಿದೆ. ಇಂತಹ ಪ್ರಯತ್ನಗಳಲ್ಲಿ ಕರ್ನಾಟಕ ರಾಜ್ಯದ ಬೆಳಗಾವಿ ಜಿಲ್ಲೆಯ ಅಥಣಿ ತಾಲೂಕಿನ ಶಾಸನಗಳನ್ನು ಸಾಂಸ್ಕೃತಿಕವಾಗಿ ಸಮೀಕ್ಷಿಸುವುದು ಇಲ್ಲಿನ ಮುಖ್ಯ ಉದ್ದೇಶವಾಗಿದೆ.

ಪ್ರಸ್ತುತ ಪ್ರಬಂಧದ ಅಧ್ಯಯನ ವಿಷಯ "ಅಥಣಿ ತಾಲೂಕಿನ ಶಾಸನಗಳ ಸಾಂಸ್ಕೃತಿಕ ಸಮೀಕ್ಷೆ" ಅಧ್ಯಯನಕ್ಕೆ ಸಂಬಂಧಪಟ್ಟ ಹಾಗೆ ಇಲ್ಲಿ ದೊರೆತಿರುವ ಶಾಸನಗಳನ್ನು ಬಳಸಿಕೊಂಡು ಇತಿಹಾಸ ಸಂಸ್ಕೃತಿಯನ್ನು ವಿವೇಚಿಸುವ ಪ್ರಯತ್ನಮಾಡಲಾಗಿದೆ. ಅಥಣಿ ತಾಲೂಕಿನ ಪರಿಸರದಲ್ಲಿ ದೊರೆತಿರುವ ಶಾಸನಗಳೆಂದರೆ ಕರ್ನಾಟಕ ಇನ್‌ಸ್ಕ್ರಿಪಶನ್ಸ್ ವಾಲ್ಯೂಂ ನಂ.೨ ರಲ್ಲಿ ಕಲ್ಯಾಣ ಚಾಲುಕ್ಯರ ಕಾಲಕ್ಕೆ ಸಂಬಂಧಪಟ್ಟ ಐದು ಶಾಸನಗಳು, ರಾಮತೀರ್ಥದಲ್ಲಿ ಒಂದು ದೊರೆತಿದೆ ಕೊಕಟನೂರದಲ್ಲಿ ಒಂದು ಹಾಗೂ ತೇಲಸಂಗ ಗ್ರಾಮದಲ್ಲಿ ಮೂರು ಶಾಸನಗಳು ಕಂಡು ಬಂದಿವೆ ಕಲಚೂರಿ ಅರಸರಿಗೆ ಸಂಬಂಧಪಟ್ಟವು ಹಾಗೆ ನಾಲ್ಕು ಶಾಸನಗಳು ಕಂಡು ಬಂದಿರುತ್ತವೆ.

ರಾಮತೀರ್ಥದಲ್ಲಿ ಮೂರು ಶಾಸನಗಳು ತೇಲಸಂಗ ಎಂಬಲ್ಲಿ ಒಂದು ಶಾಸನ ಕಂಡು ಬಂದಿದೆ ಈ ಶಾಸನಗಳನ್ನು ಆರ್.ಎಸ್. ಪಂಚಮುಖಿಯವರು ಪ್ರಕಟಪಡಿಸಿದ್ದಾರೆ. ಕೆ.ಜಿ. ಕುಂದಣಗಾರ ಅವರು ಪ್ರಕಟಪಡಿಸಿದ ದಿ. ಇನಸ್ಕ್ರಿಪ್ಶನ್ಸ್ ಇನ್ ಸೌದರ್ನ ಕರ್ನಾಟಕ ಆಂಡ್ ಕೊಲ್ಹಾಪೂರ ಸ್ಟೇಟ ಇದರಲ್ಲಿ ಯಾದವ ವಂಶಕ್ಕೆ ಸಂಬಂಧಪಟ್ಟಂತೆ ಕೊಕಟನೂರ ಗ್ರಾಮದಲ್ಲಿ ಒಂದು ಶಾಸನ ದೊರೆತಿದೆ ಶಿಲಾಹಾರರ ಕಾಲಕ್ಕೆ ಸಂಬಂಧಿಸಿದಂತೆ ಜೂಗಳದಲ್ಲಿ ಒಂದು ಮತ್ತು ಶೇಡಬಾಳ ಎಂಬ ಗ್ರಾಮದಲ್ಲಿ ಒಂದು ಶಾಸನ ದೊರೆತಿದೆ ಎ. ಎಂಬ ಅಣ್ಣಿಗೇರಿ ಹಾಗೂ ಬಿ.ಆರ್. ಜೋಶಿಯವರು ಬರೆದ ಡಿಸ್ಕ್ರಿಪಟಿವ್ ಲಿಸ್ಟ ಆಪ್ ಸ್ಟೋನ ಆಂಡ ಕಾಪರ ಪ್ಲೇಟದಲ್ಲಿ ಮುರಗುಂಡಿ ತಾಮ್ರಪಟ ಶಾಸನ ದೊರೆತಿದೆ.

ಕನ್ನಡ ನಾಡಿನ ಸಾಂಸ್ಕೃತಿಕ ಹಿರಿಮೆಯನ್ನು ಹೊತ್ತು ಮೆರೆದ ಈ ಪ್ರಸ್ತುತ ಅಧ್ಯಯನದ ಅಥಣಿ ತಾಲೂಕಿನ ಪ್ರದೇಶವು ಹಲವು ಹಿಂದಿನ ಆಡಳಿತ ವಿಭಾಗದಲ್ಲಿ ಹಂಚಿ ಹೋಗಿತ್ತು. ೧) ಕರ್ಹಾಡ ನಾಲ್ಸಾಸಿರ, ೨) ಮಿರಿಂಜೆ ಮೂರು ಸಾಸೀರ, ೩) ಉಂಬರವಾಣಿ ಮೂವತ್ತಾರು ಬಾಡ, ೪) ತುಂಗಳ ಹನ್ನೆರಡು, ೫) ಕೋರ್ಗಟನೂರು, ೬) ಬಾಡಗಿ, ೭) ಕಲ್ಯಾಣ ಹೀಗೆ ವಿವಿಧ ವಿಭಾಗಗಳಲ್ಲಿ ಹಂಚಿ ಹೋಗಿರುವ ಅಥಣಿ ಪರಿಸರದ ಇತಿಹಾಸವನ್ನು ಶಾಸನಗಳ ಅಧ್ಯಯನದ ಮೂಲಕ ಸಾಂಸ್ಕೃತಿಕ ಅಧ್ಯಯನ ಕೈಗೊಳ್ಳುವುದು ಹಾಗೂ ಕರ್ನಾಟಕದ ಇತಿಹಾಸದಲ್ಲಿ ಈ ನಾಡು ವಹಿಸಿದ ಪಾತ್ರದ ಮೇಲೆ ಬೆಳಕು ಚೆಲ್ಲುವುದು ಪ್ರಸ್ತುತ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

ಈ ಸಂಪ್ರಬಂಧವು ಒಟ್ಟು ೫ ಅಧ್ಯಾಯಗಳನ್ನು ಒಳಗೊಂಡಿದ್ದು ಮೊದಲನೆಯ ಅಧ್ಯಾಯ ಅಧ್ಯಯನದ ಅಗತ್ಯ, ಸ್ವರೂಪ, ವೈಧಾನಿಕತೆ ಮತ್ತು ವ್ಯಾಪ್ತಿ ಎಂದಿದ್ದು ಇದರಲ್ಲಿ ಅಧ್ಯಯನದ ಅಗತ್ಯ ಸ್ವರೂಪದೊಂದಿಗೆ ಆಗಿರುವ ಅಧ್ಯಯನಗಳು ಆಕರ ವೈಧಾನಿಕತೆ ವ್ಯಾಪ್ತಿಯನ್ನು ಅಧ್ಯಯನ ಕ್ರಮವನ್ನು ಸ್ಪಷ್ಟಪಡಿಸಲಾಗಿದೆ. ಎರಡನೆಯ ಅಧ್ಯಾಯದಲ್ಲಿ ಅಥಣಿ ತಾಲೂಕಿನ ಚಾರಿತ್ರಿಕ ಹಿನ್ನೆಲೆಯನ್ನು ಗಮನಿಸಲಾಗಿದೆ. ಒಟ್ಟು ತಾಲೂಕಿನ ಸಮಗ್ರ ಚಾರಿತ್ರಿಕ ಸಂಗತಿಗಳನ್ನು ಇಲ್ಲಿ ಚರ್ಚಿಸಲಾಗಿದೆ. ಅಧ್ಯಾಯ-೩ ರಲ್ಲಿ ಅಥಣಿ ತಾಲೂಕಿನ ಶಾಸನಗಳ ಭಾಷೆ ಸಾಹಿತ್ಯಿಕ ಸ್ವರೂಪವನ್ನು ಗಮನಿಸಲಾಗಿದ್ದು, ಸಾಹಿತ್ಯಿಕವಾಗಿ ಶಾಸನಗಳ ಮಹತ್ವ ಶಾಸನಗಳಲ್ಲಿ ಭಾಷೆಯ ಸಾಹಿತ್ಯಗಳ ಹಿರಿಮೆಯನ್ನು ಗಮನಿಸಲಾಗಿದೆ. ಇನ್ನೂ ೪ ನೇ ಅಧ್ಯಾಯದಲ್ಲಿ ಅಥಣಿ ತಾಲೂಕಿನ ಶಾಸನಗಳ ಸಾಂಸ್ಕೃತಿಕ ಪ್ರಾಮುಖ್ಯತೆ ಗಮನಿಸಲಾಗಿದ್ದು ರಾಜಕೀಯ, ಸಾಮಾಜಿಕ, ಆರ್ಥಿಕ, ಧಾರ್ಮಿಕ, ಶೈಕ್ಷಣಿಕ, ಸಾಹಿತ್ಯಿಕ ಸ್ಥಿತಿಗತಿಗಳನ್ನು ಗಮನಿಸಲಾಗಿದೆ. ಒಟ್ಟು ಸಾಂಸ್ಕೃತಿಕ ಪರಂಪರೆಯನ್ನು ಕಟ್ಟಿಕೊಡಲು ಯತ್ನಿಸಲಾಗಿದೆ. ೫ನೆಯ ಅಧ್ಯಾಯದಲ್ಲಿ ಅಧ್ಯಯನದ ಫಲಶ್ರುತಿಯ ಕುರಿತು ಸಮಾರೋಪವಿದೆ. ಕೊನೆಯಲ್ಲಿ ಅನುಬಂಧವಿದ್ದು ಅಥಣಿ ತಾಲೂಕಿನ ಶಾಸನಗಳು, ಗ್ರಂಥ ಋಣದ ಪಟ್ಟಿ ನೀಡಲಾಗಿದೆ.

ಹೀಗೆ ಶಾಸನಗಳಿಂದ ಲಭ್ಯವಾದ ವಿವಿಧ ವಿಷಯಗಳನ್ನು ಕಲೆ ಹಾಕುವುದರೊಂದಿಗೆ ವಿಷಯ ಸಮರ್ಥನೆಗಾಗಿ, ಅರ್ಥ ಸ್ಪಷ್ಟತೆಗಾಗಿ ಇದುವರೆಗೆ ಬಂದಿರುವ ಅಧ್ಯಯನಗಳ ನೇರವನ್ನು ಪಡೆಯಲಾಗಿದೆ.

ಶಾಸನಗಳ ವ್ಯವಹಾರಿಕ ದಾಖಲೆಗಳಾಗಿರುವುದರಿಂದ ಭಾಷೆಯ ಆರಂಭದ ಕಾಲದಲ್ಲಿಯೇ ರೂಪಗೊಂಡಿರುತ್ತವೆ. ಆದ್ದರಿಂದ ಯಾವುದೇ ಭಾಷೆ ಅಥವಾ ಸಾಹಿತ್ಯದ ಉಗಮದ ಮೇಲೆ ಅವು ಅಮೂಲ್ಯ ಬೆಳಕು ಬೀರುತ್ತವೆ. ಅವುಗಳ ತಲಸ್ಪರ್ಶಿ ಅಧ್ಯಯನದಿಂದ ಆಯಾ ಭಾಷೆ ಸಾಹಿತ್ಯಗಳ ಪ್ರಾಚೀನತೆಯನ್ನು ನಿರ್ಣಯಿಸಬಹುದು. ರಾಜಕೀಯ ಚರಿತ್ರೆ ರಚನೆಗೆ ಶಾಸನಗಳು ಮೂಲ ಬೀಜಗಳಾದಂತೆ ಭಾಷೆ ಸಾಹಿತ್ಯಗಳ ಹಳಮೆಯನ್ನು ಪ್ರಚುರ ಪಡಿಸಲು ಅವು ಅತ್ಯಂತ ವಿಶ್ವಾಸಾರ್ಹ ಸಾಧನೆಗಳೆನಿಸಿವೆ.

ಶಾಸನಗಳು ಆಯಾ ಕಾಲದ ಜನಭಾಷೆಯಲ್ಲಿ ಲಿಖಿತಗೊಂಡ ದಾಖಲೆಗಳಾಗಿವೆ. ಇವು ನಡೆದು ಬಂದ ರೀತಿ, ಸಾಧಿಸಿದ ಸಾಹಿತ್ಯ ಸಿದ್ದಿಯು ಅಷ್ಟೆ ಮೌಲಿಕವಾಗಿದೆ. ೩೦೦೦ ದಷ್ಟು ಅನ್ಯ ಭಾಷಾ ಶಾಸನಗಳನ್ನು ಬಿಟ್ಟರೆ ಉಳಿಯುವ ಸುಮಾರು ೨೦ ಸಾವಿರ ಕನ್ನಡ ಶಾಸನಗಳಲ್ಲಿ ಸಾಹಿತ್ಯ ಗದ್ಯದಿಂದ ಕೂಡಿದ ಶಾಸನಗಳು ಸಾವಿರಾರು ಸಂಖ್ಯೆಯಲ್ಲಿವೆ. ಇವುಗಳಲ್ಲಿ ಮೊದ ಮೊದಲು ಸಾಮಾನ್ಯ ಗದ್ಯ ಹೆಚ್ಚು ಬರ ಬರುತ್ತ ಸಮಾಸಯುಕ್ತ ಪದ್ಯ ಮತ್ತು ಗದ್ಯ ಪದ್ಯ ಮಿಶ್ರಣ ಹೆಚ್ಚಾಗಿ ಕಂಡುಬರುತ್ತದೆ. ಗದ್ಯ ಪದ್ಯಗಳ ಅದರಲ್ಲಿಯು ಕಂದ ವೃತ್ತಗಳ ಬಳಕೆ ಅಧಿಕ ಗದ್ಯ ಸಾಮಾನ್ಯವಾಗಿದೆ.

ಅಥಣಿ ತಾಲೂಕಿನ ಕೊಕಟನೂರು ಹಾಗೂ ಅಥಣಿ ತಾಲೂಕಿನ ವಿಷಯ ವಸ್ತುವನ್ನೊಳಗೊಂಡ ಜತ್ತ ತಾಲೂಕಿನ ಉಮರಾಣಿ ಶಾಸನಗಳಲ್ಲಿ ಸಾಹಿತ್ಯದ ರೂಪುಗಳಾದ ಚಂಪೂ, ವೃತ್ತ ಮತ್ತು ಕಂದ ಬಳಕೆಗೊಂಡಿರುವುದು ಕಾಣುತ್ತೇವೆ. ಈ ನಾಡಿನ ಶಾಸನಗಳ ರಚನೆಯಲ್ಲಿ ಕರ್ನಾಟಕ ಖ್ಯಾತ ವೃತ್ತಗಳಾದ ಮಹಾಸ್ರಗ್ದರಾವೃತ್ತ, ಮತ್ತೇಭ ವಿಕ್ರೀಡಿತ ವೃತ್ತ, ಚಂಪಕಮಾಲಾ ವೃತ್ತ, ಶಾಲಿನಿ ವೃತ್ತ, ಅನುಷ್ಟಪ, ಮಾಲಿನಿ, ಶಾರ್ದೂಲ ವಿಕ್ರೀಡಿತ ವೃತ್ತಗಳು ಮತ್ತು ಕಂದ ಪದ್ಯಗಳು ಕಂಡು ಬಂದಿರುವುದು ಗಮನಾರ್ಹವಾಗಿದೆ.

ಕೊಕಟನೂರ ಶಾಸನವು ಹನ್ನೊಂದು ವೃತ್ತಗಳನ್ನು ಒಳಗೊಂಡಿದ್ದು ಇವುಗಳಲ್ಲಿ ಮೂರು ಮಹಾಸ್ರಗ್ದರಾ ವೃತ್ತ, ಐದು ಮತ್ತೇಭವಿಕ್ರಿಡಿತ ವೃತ್ತಗಳು; ಒಂದು ಚಂಪಕಮಾಲಾ ವೃತ್ತ, ಒಂದು ಶಾಲಿನಿ ವೃತ್ತ ಮತ್ತು ಒಂದು ಅನುಷ್ಟದ ವೃತ್ತದ ಪದ್ಯಗಳಿವೆ ಆದರೆ ಶಾಸನವು ಅಲ್ಲಲ್ಲಿ ತ್ರುಟಿತವಾಗಿರುವುದರಿಂದ ಸ್ಪಷ್ಟವಾಗಿರುವಂತಹ ಕೆಲವು ವೃತ್ತಗಳ ಉದಾಹರಣೆಯನ್ನು ವಿವರಿಸಲಾಗಿದೆ.

**ಮತ್ತೇಭ ವಿಕ್ರೀಡಿತ ವೃತ್ತ :**

ಜನಿತೋತ್ಸಾಹದ ಮಣ್ಡಳೇಶತಿಳಕಂ ಶ್ರೀ ಜೋಗಭೂಪಂ ಜಗ
ಜನ ಚಿನ್ತಾಮಣಿ ತಾನಿದಂ ಬೆಸಸಲೀ ತ್ರೈಮೂರ್ತಿ ದೇವಗ್ರ್ಗೇ ಶಾ
ಸನಂ ಶಾಸನಮಾಗಲೆಯ್ದೆ ಬರೆದಂ ವಿದ್ವಜನಾಂಭೋಜನೀ
ವನಹಂಸಂ ಜೇನವರ್ಮ ಪಣ್ದಿತನಿಳಾಭಾಸ್ವದ್ಯ ಶೋಮಣ್ದಿ ತಂ

ಲಕ್ಷಣ : ಈ ಶಾಸನ ಪದ್ಯದಲ್ಲಿ ಮತ್ತೇಭ ವಿಕ್ರೀಡಿತದ ಎಲ್ಲಾ ನಿಯಮಗಳಿದ್ದು ಪ್ರತಿ ಪಾದವಲ್ಲಿ ಇಪ್ಪತ್ತು ಅಕ್ಷರಗಳು ಬಂದಿವೆ. ನಾಲ್ಕು ಸಾಲಿನ ಪದ್ಯವಾಗಿರುವ ಇದರಲ್ಲಿ ಪ್ರತಿಪಾದದಲ್ಲಿ ಸ, ಭ, ರ, ನ, ಮ, ಯ ಗಣಗಳು ಕೊನೆಯಲ್ಲಿ ಒಂದು ಗುರು ಉಳಿದಿದೆ. ಹದಿಮೂರನೇಯ ಸ್ಥಾನದಲ್ಲಿ "ಯತಿ" ಬಂದಿದೆ ಹಾಗೂ ಪ್ರತಿ ಪಾದದಲ್ಲಿ "ಆದಿ ಪ್ರಾಸ" ಕಾಣಬಹುದಾಗಿದೆ.

**ಚಂಪಕ ಮಾಲಾ ವೃತ್ತ :**

ಜನಕಜೆ ಸಾಟಿ ಹೇಮವತಿ-ರೋಹಿಣಿ ತತ್ಸರೂಪೇವಾ
ಗ್ವನಿತೆ ಸಮಂ ತಿಳೋತ್ತಮ ಸಮಾನ ಮರುನ್ದತಿ ಮಿಕ್ಕ ಪೊಲ್ವಿಗೋ
ಮಿನಿ ದೊರೆ ಸತ್ಯಭಾಮೇ ಸರಿ ರೇಣುಕಿ ಮನ್ಮಥ ಪ್ರಿಯಾಂ
ಗನೆ ದೊರೆಯೆಂಬುದೆಂಬುದು ಪೆರದ್ರ್ಗೊರೆಯೆಂಬುದೆ ಪೊಲ್ಲಿಕಬ್ಬೆಯೋಳ್

ಲಕ್ಷಣ : ಚಂಪಕಮಾಲಾ ವೃತ್ತವು ನಾಲ್ಕು ಪಾದಗಳ ಸಮವೃತ್ತ ಪದ್ಯ, ಪ್ರತಿ ಚರಣದಲ್ಲಿ ಇಪ್ಪತ್ತೊಂದು ಅಕ್ಷರಗಳಿರುವುದು ಹಾಗೂ ನ.ಜ.ಭ.ಜ.ಜ.ರ ಎಂಬ ಗಣಗಳಿವೆ. ಅಲ್ಲದೆ ೧೩ನೇ ಅಕ್ಷರದಲ್ಲಿ "ಯತಿ" ಮತ್ತು ಪ್ರತಿಯೊಂದು ಚರಣದ ಆದಿಯಲ್ಲಿ ನಾಲ್ಕು ಲಘು ಬಂದಿರುವುದರಿಂದ ಇದು ಚಂಪಕಮಾಲಾ ವೃತ್ತ ಎಲ್ಲ ನಿಯಮಗಳನ್ನು ಒಳಗೊಂಡಿರುತ್ತದೆ.

ಮುಖ್ಯವಾಗಿ ಲಿಪಿಯ ಆಧಾರದ ಮೇಲೆ ಕೆಲವೊಮ್ಮೆ ಸಾಕ್ಷಗಳ ಆಧಾರದ ಮೇಲೆ ಸುಮಾರು ೭-೮ ಶತಮಾನಗಳಿಗೆ ಸೇರಿದವರೆಂದು ಗೊತ್ತು ಮಾಡಿರುವ ಶ್ರವಣಬೆಳಗೋಳದ ಶಾಸನ ಪದ್ಯಗಳು ಭಾಷೆ ಛಂದಸ್ಸುಗಳ ದೃಷ್ಠಿಯಿಂದ ಈಚಿನ ವ್ಯಾಕರಣ ಛಂದಶಾಸ್ತ್ರಗಳ ಕಟ್ಟು ಕಟ್ಟಳೆಗಳಿಗೆ ಒಳಪಡುವ ರೀತಿಯ ರಚನೆಗಳನ್ನು ಅಲ್ಲಲ್ಲಿ ಮಾಸಗಾಣುತ್ತವೆಂಬುದರಲ್ಲಿ ಸಂದೇಹವಿಲ್ಲ.

**ಕಂದಪದ್ಯ :**

ಜತ್ತ ತಾಲೂಕಿನ ಉಮರಾಣಿ ಹಾಗೂ ಕೊಕಟನೂರ ಶಾಸನಗಳಲ್ಲಿ ಒಟ್ಟು ೨೦ ಕಂದ ಪದ್ಯಗಳು ಬಳಕೆಯಾಗಿರುವುದು ಗೊತ್ತಾಗುತ್ತದೆ. ಉದಾ: ಕೆಲವೊಂದು ಕಂದ ಪದ್ಯಗಳನ್ನು ಮಾತ್ರ ಅಧ್ಯಯನಕ್ಕೆ ಬಳಸಿಕೋಳ್ಳಲಾಗಿದೆ.

ಕಂದ ಪದ್ಯವು ನಾಲ್ಕು ಸಾಲುಗಳ ಒಂದು ಛಂದೋಬಂಧವಾಗಿದ್ದು ಹಳಗನ್ನಡ ಚಂಪೂ ಕಾವ್ಯಗಳಲ್ಲಿ ಬಳಕೆಯಾದಂತೆ ಶಾಸನಗಳಲ್ಲಿಯೂ ಬಳಕೆಗೊಂಡಿರುವುದು ಗಮನಾರ್ಹ. ಕನ್ನಡ ಸಾಹಿತ್ಯದ ರತ್ನತ್ರಯರಾದ ಪಂಪ, ರನ್ನ ಮತ್ತು ಪೊನ್ನರು ವೃತ್ತಗಳ ನಡುವೆ ಕಂದ ಪದ್ಯಗಳನ್ನು ವಿಶೇಷವಾಗಿ ಬಳಸಿಕೊಂಡಿದ್ದು ಕಂಡು ಬರುತ್ತದೆ.

ಕಂದ ಸಂಸ್ಕೃತದಲ್ಲಿ ಆರ್ಯಗೀತ ಎನಿಸಿದರೂ ಪ್ರಾಕೃತದಲ್ಲಿ "ಸ್ಕಂದಕ" ಎನಿಸಿದ ಛಂದೋವಿಧಾನವು ಕನ್ನಡದಲ್ಲಿ ಕಂದವಾಗಿದೆ.

ಲಕ್ಷಣ : ಕಂದವು ನಾಲ್ಕು ಪಾದಗಳಿಂದ ಕೂಡಿದ ಅರ್ಧ ಸಮವೃತ್ತ ಪದ್ಯ ಮೊದಲನೆಯ ಮತ್ತು ಮೂರನೆಯ ಪಾದಗಳಲ್ಲಿ ನಾಲ್ಕು ಮಾತ್ರೆಯ ಮೂರು ಗಣಗಳು ಬರುತ್ತವೆ. ಎರಡನೆಯ ಮತ್ತು ನಾಲ್ಕನೇಯ ಪಾದಗಳಲ್ಲಿ ನಾಲ್ಕು ಮಾತ್ರೆಯ ಐದು ಗಣಗಳು ಬರುತ್ತವೆ. ಮೂರು ಐದು ಮತ್ತು ಏಳನೇಯ ವಿಷಯ ಸ್ಥಾನದಲ್ಲಿ "ಜ" ಗಣ ಬರಕೂಡದು ಎರಡು ಮತ್ತು ನಾಲ್ಕನೇಯ ಪಾದಗಳ ಕೊನೆಯ ಅಕ್ಷರವು ಕಡ್ಡಾಯವಾಗಿ ಗುರು ಆಗಿರಬೇಕು. ಆರು ಮತ್ತು ಹದಿನಾಲ್ಕನೇಯ ಸ್ಥಾನದ ಗಣವು ಮಧ್ಯಗಣವುಳ್ಳದಾಗಲಿ "ಜ" ಗಣ ಅಥವಾ ಸರ್ವ ಲಘು ಗಣವಾಗಲಿ ಆಗಿರಬೇಕು. ಮೊದಲಿನ ಹೃಸ್ವದ ಮುಂದೆ ಯತಿ ಇರುತ್ತದೆ.

ಈ ಮೇಲಿನ ಲಕ್ಷಣಕ್ಕೆ ಅನುಗುಣವಾಗಿ ಉಮ್ರಾಣಿ ಶಾಸನದಲ್ಲಿ ಬಳಕೆಯಾದ ಒಂದು ಕಂದ ಪದ್ಯವನ್ನು ಉದಾಹರಣೆಯಾಗಿ ತೆಗೆದುಕೊಳ್ಳಲಾಗಿದೆ.

ಭೂದಾನಂ ಗೃಹದಾನಂ
ಗೋದಾನಂ ವಸ್ತ್ರವಿತ್ತಭೋಜನ ಕನ್ಯಾಂ
ಭೋದಾನವಿವಂ ಮಾಳ್ಪಂ
ಬಾದೇಂ ಶ್ರೀ ಕಲ್ಲಿಸೆಟ್ಟಿ ವಿಪ್ರರ್ಗ್ಗೆಲ್ಲಂ

ಇನ್ನೂ ಕೊಕಟನೂರು ಶಾಸನದಲ್ಲಿ ಬಳಕೆಯಾಗಿರುವ ಕಂದ ಪದ್ಯವನ್ನು ಛಂದಸ್ಸಿನ ಹಿನ್ನೆಲೆಯಲ್ಲಿ ಒಂದು ಪದ್ಯ ಉದಾಹರಣೆಯಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ. ಅದು ಈ ಕೆಳಗಿನಂತಿದೆ.

ಶಾಲೆಯ ಪರಿಸೂತ್ರದೋಳಾ
ತ್ಶಾಲಯಮಂ ಮಾಡಿಕೊಳ್ವದಲ್ಲದೆ ಪೆರತೊ
ನ್ಶಾಲಯ ಮೊಳಿರ್ಪ್ಪವಂ ಪ್ರತಿ
ಕೂಲಂ. ಲೋಲಂ ನಿವಿಷ್ಟ ನಲ್ಲಂ ದುಷ್ಟಂ

ಲಕ್ಷಣ : ಮೊದಲನೆಯ ಮತ್ತು ಮೂರನೇಯ ಪಾದಗಳಲ್ಲಿ ನಾಲ್ಕು ಮತ್ತು ಮೂರು ಗನ ಬಂದಿದೆ ಎರಡನೇಯ ಮತ್ತು ನಾಲ್ಕನೆಯ ಪಾದದಲ್ಲಿ ನಾಲ್ಕು ಮಾತ್ರೇಯ ಐದು ಗಣಗಳಿವೆ. ಮೂರು, ಐದು ಮತ್ತು ಏಳನೇಯ ವಿಷಮ ಸ್ಥಾನದಲ್ಲಿ "ಜ" ಗಣ ಬಂದಿರುವುದಿಲ್ಲಾ ಎರಡು ಮತ್ತು ನಾಲ್ಕನೆಯ ಪಾದಗಳ ಕೊನೆಯಲ್ಲಿ ಅಕ್ಷರ ಕಡ್ಡಾಯವಾಗಿ

ಗುರು ಆಗಿದೆ. ಆರು ಮತ್ತು ಹದಿನ್ನಾಲನೆಯ ಸ್ಥಾನವು "ಜ" ಗಣ ಅಥವಾ ಸರ್ವ ಲಘು ಆಗಿರಬೇಕೆಂಬ ನಿಯಮ ಆದರೆ ಇಲ್ಲಿ ಸರಿಯಾಗಿ "ಜ" ಗಣ ಬಂದಿದೆ.

ಅಥಣಿ ತಾಲೂಕಿನ ಶಾಸನಗಳನ್ನು ಆದರಿಸಿ ಶಾಸನಗಳಲ್ಲಿ ಛಂದಸ್ಸನ್ನು ಅಧ್ಯಯನ ಮಾಡಲಾಗಿದೆ.

**ಶಾಸನಗಳ ಭಾಷಿಕ ಮಹತ್ವ :**

ಶಾಸನಗಳಿಂದ ಆಯಾ ಕಾಲಘಟ್ಟದಲ್ಲಾದ ಕೆಲವು ಮಹತ್ವದ ಭಾಷಿಕಾಂಶಗಳ ಬದಲಾವಣೆಗಳನ್ನು ತಿಳಿಯಬಹುದು. ಉದಾಹರಣೆಗೆ ಕರ್ನಾಟಕದ ಶಾಸನಗಳಿಗೆ ಕನ್ನಡ ಭಾಷೆಯ ಪ್ರಾರಂಭದ ಕಾಲದಲ್ಲಿ ಪ್ರಾಕೃತವು ಮಹತ್ವದ ಪರಿಣಾಮ ಬೀರಿದೆ ಎಂಬ ವಂಶವು ಕರ್ನಾಟಕದ ಆರಂಭದ ಶಾಸನಗಳಿಂದ ವೇದ್ಯವಾಗುತ್ತದೆ.

ಆರನೇಯ ಶತಮಾನದ ಸಂಸ್ಕೃತ ಶಾಸನಗಳಲ್ಲಿ ಕನ್ನಡ ಅಂಶಗಳು ಇನ್ನೂ ಹೆಚ್ಚಾಗಿವೆ. ಬರಬರುತ್ತಾ ಕನ್ನಡ ಶಾಸನಗಳ ಸಂಖ್ಯೆ ಹೆಚ್ಚಾದವಾದರೂ ಈ ಹೆಚ್ಚಳವು ಪ್ರಾಕೃತ ಶಾಸನಗಳನ್ನು ತಡೆದಂತೆ ಸಂಸ್ಕೃತ ಶಾಸನಗಳನ್ನು ತಡೆಯಲಿಲ್ಲ. ಹಲವಾರು ಸಂಸ್ಕೃತ ಶಾಸನಗಳ ಅಂತ್ಯದಲ್ಲಿ ಕನ್ನಡ ಬರಹವಿರುವುದು ಆರನೇ ಶತಮಾನದಿಂದ ಕಂಡುಬರುತ್ತದೆ. ಭೋಗಿವರ್ಮನ ತಗರೆಯ ಶಾಸನವನ್ನು ಇದಕ್ಕೆ ಉದಾಹರಣೆಯಾಗಿ ನೋಡಬಹುದು ಅದರ ಕೊನೆಯ ಐದು ಸಾಲುಗಳ ಬರಹ ಕನ್ನಡವಾಗಿದೆ. ಕನ್ನಡ ಶಾಸನಾರಂಭದಲ್ಲಿ ಸ್ವಸ್ತಿ, ನಮಸ್ತುಂಗ, ಶಿರಶ್ಚುಂಬಿ ವಚನ ಅಥವಾ ದೇವತಾಸ್ತುತಿ ಅನಂತರ ಬರುವ ಸಂಸ್ಕೃತ ದೀರ್ಘ ಸಮಾಸದ ಬಿರುದಾವಳಿ ಹಾಗೂ ಅಂತ್ಯದಲ್ಲಿ ಪುರಾಣಾದಿಗಳ ಎತ್ತಿದ ಫಲಶೃತಿ ಇಷ್ಟು ಶತಮಾನಗಳ ವರೆಗೆ ಶಾಸನಿಕ ಕನ್ನಡ ವೈಶಿಷ್ಟ್ಯಗಳೆನಿಸಿಕೊಂಡಿವೆ. ಮೇಲಿನ ಲಕ್ಷಣಗಳಿಗೆ ಪೂರಕವೆನ್ನುವಂತೆ ತೆಲಸಂಗ, ಕೊಕಟನೂರ, ಐನಾಪೂರದ ಹಾಗೂ ಇತರ ಶಾಸನಗಳಲ್ಲಿ ಈ ರೀತಿಯಾದ ಸಂಸ್ಕೃತ ಭೂಯಿಷ್ಟ ಆರಂಭಿಕ ಶ್ಲೋಕಗಳೊಂದಿಗೆ ಶಾಸನಗಳ ರಚನೆ ಆರಂಭವಾಗಿರುವುದು ಕನ್ನಡ ಶಾಸನಗಳಲ್ಲಿ ಕಂಡುಬರುತ್ತದೆ.

ಭಾರತೀಯರು ಸಹ ಶಾಸನ ಎಂಬ ಪದಕ್ಕೆ ವಿಶಾಲ ಅರ್ಥವನ್ನು ನೀಡುವುದರ ಸಲುವಾಗಿ ಅವುಗಳ ಆಂತರಿಕ ವಿಷಯಗಳನ್ನು ಗಮದಲ್ಲಿರಿಸಿಕೊಂಡು ವ್ಯಾಖ್ಯಾನಿಸಿದರು. ಹೀಗಾಗಿ ಶಾಸನವೆಂಬುದು ಆಜ್ಞೆ ಪ್ರಜೆಗಳೆಲ್ಲರೂ ಪಾಲಿಸಬೇಕಾದ ಒಂದು ಸಂಹಿತೆ ಸಂವಿಧಾನ ನೀತಿ–ನಿಯಮಗಳನ್ನು ಉಲ್ಲಂಘಿಸಿದರೆ ಶಿಕ್ಷೆಗೆ ಗುರಿಯಾಗುತ್ತಿರೆಂಬ ಎಚ್ಚರಿಕೆಯ ನೀತಿ ಸಂಹಿತೆಗಳು ಎಂಬ ವಿಶಾಲಾರ್ಥವನ್ನು ಪಡೆದುಕೊಂಡಿತು. "ಟಿಛಿಭಿಡಿಟಿಭಜ" ಎಂಬುದರಿಂದ ಹೊರಟ ಕತ್ತು, ಕೊರೆ, ಕಂಡರಿಸು ಎಂಬ ಅರ್ಥಕ್ಕಿಂತ ಭಿನ್ನವಾಗಿ ಆಡಳಿತ, ಪ್ರಭುತ್ವ, ಆಜ್ಞೆ, ಅಪ್ಪಣೆ, ಕಾನೂನು, ಕಟ್ಟಳೆ, ವಿಧಿ, ನಿಗ್ರಹ, ಹಿಡಿತ, ಶಿಕ್ಷೆ, ದಂಡನೆ, ಶಾಸ್ತ್ರಿ, ಒಪ್ಪಂದ ಮತ್ತು ಕರಾರು ಎಂಬ ವ್ಯಾಪಕ ಅರ್ಥವನ್ನು ಶಾಸನ ಪಡೆದುಕೊಂಡಿತು.

ರಾಜನ ಸಹಿ, ಮುದ್ರೆ ದಿನಾಂಕದೊಂದಿಗೆ ಅಧಿಕೃತವಾಗಿ ಹೋರಾಟ ಶಾಸನಗಳು ಶಿಲೆ, ತಾಮ್ರ, ಕಬ್ಬಿಣ ಇತ್ಯಾದಿ ಮಾಧ್ಯಮಗಳಲ್ಲಿ ಬರೆದಿರುವ ರಾಜಾಜ್ಞೆಗಳಾಗಿದ್ದಂತೆ ರಾಜರಲ್ಲದವರೂ ಬಯಸಿದಾಗಲೂ ಕೂಡ ಶಾಸನಗಳೆಂದು ಪರಿಗಣಿತವಾದವು, ವೀರರ, ಮಹಾಸತಿಯ, ಸನ್ಯಾಸಿಗಳ ಮರಣ ವೃತ್ತಾಂತವನ್ನು ಉಲ್ಲೇಖಿಸುವ ವೀರಗಲ್ಲು ಮಾಸ್ತಿಕಲ್ಲು, ನಿಷದಿ ಕಲ್ಲುಗಳು ಸಹಶಾಸನದ ಪರಂಪರೆಗೆ ಸೇರಿದವು ಇವುಗಳನ್ನು ಹೊರತುಪಡಿಸಿ ಶುದ್ಧಕಾವ್ಯ ನಾಟಕ, ವ್ಯಾಕರಣ, ಸಂಗೀತ ಮುಂತಾದ ಯಾವ ಪ್ರಕಾರವೇ ಆಗಲಿ ಶಿಲೆಯ ಮೇಲಿದ್ದರೆ ಅದು ಸಹ ಶಾಸನವೆಂಬ ಹೆಸರನ್ನು ಪಡೆಯಿತು. ಹೀಗೆ ರಾಜ ಪ್ರಭುತ್ವ ಪರಿಸರದಲ್ಲಿ ಬಳೆದು ಬಂದ ಶಾಸನಗಳು, ದಂಡನೆ, ಶಿಕ್ಷೆ, ಕರಾರು, ಕಟ್ಟಳೆ ಎಂಬ ಸಂಕುಚಿತ ಅರ್ಥದಿಂದ ಹೊರಬಂದು ಅಂದಿನ ಜನರ ಜೀವನ ಪದ್ಧತಿಯ ಎಲ್ಲ ಮುಖಗಳನ್ನು ಕಾಯ್ದುಕೊಂಡು ಬಂದ ದಾಖಲೆಗಳೆಂಬ ವಿಶಾಲಾರ್ಥವನ್ನು ಪಡೆದುಕೊಂಡವು ಶಾಸನದ ವ್ಯಾಖ್ಯೆ ಗಮನಿಸಿದಾಗ–

ಶಾಸನಗಳು ಪ್ರಮುಖವಾಗಿ ಒಂದು ಕಾಲದಲ್ಲಿ ವ್ಯವಹಾರಗಳ ಲಿಖಿತ ದಾಖಲೆಗಳು, ಪ್ರಾಚೀನ ರಾಜಕೀಯ, ಸಾಂಸ್ಕೃತಿಕ, ಸಾಮಾಜಿಕ, ಆರ್ಥಿಕ, ಧಾರ್ಮಿಕ ಅಂಶಗಳನ್ನು ಅರ್ಥಮಾಡಿಕೋಳ್ಳುವ ಮೂಲ ಸಾಮಗ್ರಿಗಳಾಗಿವೆ. ಎಂಬ ಸಿ. ನಾಗಭೂಷಣರವರ ಮಾತಿನಂತೆ ನೋಡಿದರೆ ಮೊದಲು ಶಾಸನಗಳು ರಾಜಾಜ್ಞೆಗೆಂದು ಮೀಸಲಾಗಿದ್ದವು ಆದರೆ ಕಾಲಾಂತರದಲ್ಲಿ ದಾನದ ವಿಷಯ ಹಾಗೂ ದಾನ ನೀಡಿದ ವಿಷಯ, ವಂಶದ ವರ್ಣನೆ, ಮಡಿದ ವೀರರ ಶೌರ್ಯ, ರಾಜರ ಲೋಕೋಪಯೋಗಿ ಕಾರ್ಯ ಹೀಗೆ ಅನೇಕ ವಿಷಯಗಳನ್ನು ಒಳಗೊಂಡವು ಈ ಕುರಿತು ಡಾ॥ ಎಂ. ಚಿದಾನಂದಮೂರ್ತಿಯವರು ಶಾಸನಗಳು ಪ್ರಾಚೀನ ಕರ್ನಾಟಕದ ಸಾಹಿತ್ಯ, ಧರ್ಮ, ಮತ್ತು ಸಾಮಜಗಳಿಗೆ ಹಿಡಿದ ಶಿಲಾದರ್ಪಣಗಳೆನಿಸಿವೆ. ಪ್ರಾಚೀನ ಶಾಸನಗಳಲ್ಲಿ ರಾಜ ಮನೆತನ, ರಾಜನ ಹೆಸರು, ದತ್ತಿಯ ಕಾಲ, ದತ್ತಿಯ ವಿವರ ಮಾತ್ರ ಬರೆಯುತ್ತಿದ್ದರು ಬರ ಬರುತ್ತಾ ಶಾಸನಕಾರರು ಅದರಲ್ಲಿ ದೇವತಾ ಸ್ತುತಿ, ದೇಶದ ವರ್ಣನೆ, ಅದರ ರಾಜ, ಅವನ ಅಧಿಕಾರ, ದಾನವನ್ನು ಸ್ವೀಕರಿಸುವವನ ಪಾಂಡಿತ್ಯ ಜನರ ನೀತಿಯ ಮಟ್ಟ, ಆದರ್ಶ, ಬುದ್ಧಿವಂತಿಕೆ ಇತ್ಯಾದಿ ಶಾಸನಗಳಲ್ಲಿ ಬರೆಯತೊಡಗಿದರು.

**ಸಾಮಾಜಿಕ ವ್ಯವಸ್ಥೆ:**

**ಚಾತುರ್ವರ್ಣ:**

ಪ್ರಾಚೀನ ಕಾಲದಿಂದಲೂ ಭಾರತದ ಸಾಮಾಜಿಕ ವ್ಯವಸ್ಥೆಯು ಚಾತುರ್ವರ್ಣಗಳಾಗಿ ರೂಪಗೊಂಡ ಉಲ್ಲೇಖವು ಋಗ್ವೇದದ ಪುರುಷ ಸೂಕ್ತದಲ್ಲಿದೆ. ಪುರುಷ ಸೂಕ್ತದ ಕಾಲವನ್ನು ಅಥರ್ವಣ ವೇದಕಾಲದ ಕೊನೆಯ ಭಾಗವೆಂದು ವಿದ್ವಾಂಸರು ನಿರ್ಧರಿಸಿರುತ್ತಾರೆ. ಋಗ್ವೇದದ ಅನೇಕ ಮಂತ್ರಗಳಲ್ಲಿ ಸಮಾಜವನ್ನು ಬ್ರಹ್ಮ, ಕ್ಷತ್ರ, ವೈಶ್ಯ

ಮತ್ತು ಶೂದ್ರವೆಂದು ವಿಭಾಗಿಸಿರುವುದು ಕಂಡುಬರುತ್ತದೆ. ಈ ವರ್ಗ ವ್ಯವಸ್ಥೆಯಲ್ಲಿಅಂತಹ ಕಠೋರ ನಿಯಮಗಳೇನೂ ಇರಲಿಲ್ಲ. ಶೂದ್ರರನ್ನು ಬಿಟ್ಟು ಉಳಿದವರು ಯಾವ ವರ್ಗವನ್ನು ಬೇಕಾದರೂ ಸೇರುವ ಸೌಲಭ್ಯವಿದ್ದಿತು. ಈ ವರ್ಗ ವಿಭಜನೆಯು ಹುಟ್ಟಿಗಿಂತ ಹೆಚ್ಚಾಗಿ ವೃತ್ತಿಯನ್ನವಲಂಬಿಸಿ ಮೂಡಿತು. ನಂತರದಲ್ಲಿ ವಿವಿಧ ವೃತ್ತಿಗಳಲ್ಲಿನ ಭೇದವು ಸಾಮಾಜಿಕವಾಗಿ ಮೇಲು ಕೀಳು ಭಾವನೆಗೆಡೆಮಾಡಿ ಚಾತುರ್ವರ್ಣಗಳಿಗೆ ಹಾದಿ ಮಾಡಿಕೊಟ್ಟಿರುವಂತಿವೆ. ಈ ವ್ಯವಸ್ಥೆ ಬ್ರಾಹ್ಮಣಗಳ ಕಾಲಕ್ಕೆ ಇನ್ನಷ್ಟುಬಿಗಿಗೊಳಿಸಲ್ಪಟ್ಟು ವೃತ್ತಿ ವ್ಯತ್ಯಾಸ ಹಿಮ್ಮೆಟ್ಟಿ ವ್ಯಕ್ತಿಯ ಹುಟ್ಟು, ವರ್ಣವನ್ನು ನಿರ್ಣಯಿಸುವಂತಾಯಿತು.

**ವರ್ಗ – ವರ್ಣ :**

ಬ್ರಾಹ್ಮಣಗಳ ಕಾಲದಲ್ಲಿ ವರ್ಗವ್ಯವಸ್ಥೆಯನ್ನು ವರ್ಣ ವ್ಯವಸ್ಥೆಯೆಂದು ಕರೆದು ಅದನ್ನು ಬಿಗಿಗೊಳಿಸಲಾಯಿತು. ಅಲ್ಲದೆ ವ್ಯಕ್ತಿಯ ವರ್ಣವನ್ನು ನಿರ್ಣಯಿಸುತ್ತಿದ್ದುದು ಅವನ ಹುಟ್ಟೇ ಹೊರೆತು ವೃತ್ತಿಯಲ್ಲ.ಪ್ರಾಚೀನ ಕರ್ನಾಟಕದಲ್ಲಿ ವರ್ಣ ಪದ್ದತಿಯ ಪರಿಪಾಲನೆಯು ಬಹುಮಟ್ಟಿಗೆ ಕುಸಿದು ಹೋಗಿ ಕುಲ ಮತ್ತು ವೃತ್ತಿ, ಸಮಾಜದಲ್ಲಿ ಮೇಲು – ಕೀಳು ಎಂಬ ವರ್ಗಭೇದವನ್ನು ಹುಟ್ಟುಹಾಕಿರುವುದು ಗಮನಕ್ಕೆ ಬರುತ್ತದೆ.

**ಪ್ರಭುವರ್ಗ:**

ಮಧ್ಯಕಾಲೀನ ಕರ್ನಾಟಕದ ಸಾಮಾಜಿಕ ವ್ಯವಸ್ಥೆಯಲ್ಲಿ ಪ್ರಮುಖವಾಗಿ ಪ್ರಭುವರ್ಗ ಮತ್ತು ಶ್ರಮಿಕ ವರ್ಗಗಳಿರುವುದನ್ನು ಕನ್ನಡ ಶಾಸನ ಅಧ್ಯಯನ ಮಾಡಿದ ವಿದ್ವಾಂಸರು ಇದುವರೆಗೆ ಪ್ರಸ್ತಾಪಿಸುತ್ತಲೇ ಬಂದಿದ್ದಾರೆ. ಇಲ್ಲಿ ಪ್ರಭುವರ್ಗ ಪುರೋಹಿತ, ರಾಜ ಹಾಗೂ ವಿವಿಧ ಅಧಿಕಾರಿಗಳನ್ನೊಳಗೊಂಡರೆ ಶ್ರಮಿಕವರ್ಗ ವಿವಿಧ ವೃತ್ತಿಗಳನ್ನು ಕೈಕೊಂಡ ಜನಸಾಮಾನ್ಯರನ್ನು ಪ್ರತಿನಿಧಿಸುತ್ತದೆ. ಇದನ್ನು ಕಣಂಬಡೆ ನಾಡಿನ ಸಾಮಾಜಿಕ ವ್ಯವಸ್ಥೆಗೂ ಅನ್ವಯಿಸಿ ಹೇಳಬಹುದು.

**ಮಹಾಜನರು:**

ಸಮಾಜ ವ್ಯವಸ್ಥೆಯ ಉನ್ನತ ಸ್ತರದಲ್ಲಿರುವವರು ಪುರೋಹಿತ ವರ್ಗ ಅಥವಾ ಮಹಾಜನರು. ಅಗ್ರಹಾರದಲ್ಲಿರುವ ಬ್ರಾಹ್ಮಣರನ್ನು ಮಹಾಜನರೆಂದು ಕರೆಯುತ್ತಿದ್ದರು. ಪ್ರಾಚೀನ ಕರ್ನಾಟಕದಲ್ಲಿ ಬ್ರಾಹ್ಮಣರು ಅತ್ಯಂತ ಪ್ರಭಾವಶಾಲಿಗಳಾಗಿದ್ದು, ಜಾತಿಗಳಲ್ಲೆಲ್ಲ ಬ್ರಾಹ್ಮಣ ಜಾತಿಯೇ ಉತ್ತಮವಾದುದು ಎಂದು ಪಂಪನು ಪ್ರಸ್ತಾಪಿಸಿದ್ದಾನೆ. ಮಹಾಜನರು ಅಂದಿನ ಸಮಾಜದಲ್ಲಿ ಪ್ರತಿಷ್ಠಿತರೆನಿಸಿದ್ದರು. ಯಜನ, ಯಾಜನ ಅಧ್ಯಯನ, ಅಧ್ಯಾಪನ, ದಾನ ಪ್ರತಿಗ್ರಹಣ ಇವು ಅವರ ಪ್ರಮುಖ ಕರ್ತವ್ಯಗಳಾಗಿದ್ದವು. ಊರಿನಲ್ಲಿ ಯಾವ ಕಾರ್ಯನಡೆದರೂ ಅದು ಮಹಾಜನರ ಸನ್ನಿಧಿಯಲ್ಲಿ ನಡೆಯುತ್ತಿತ್ತು. ಗ್ರಾಮ

ಕಾರ್ಯನಿಮಿತ್ತವಾಗಿ ಯಾರಾದರೂ ಹಣವನ್ನೋ, ಭೂಮಿಯನ್ನೋ, ದಾನ ಮಾಡಿದರೆ ಅದನ್ನು ಇವರು ಸ್ವೀಕರಿಸುತ್ತಿದ್ದರು. ಅಷ್ಟೇ ಅಲ್ಲ ಅದನ್ನು ರಕ್ಷಿಸುತ್ತಿದ್ದವರು, ವಿನಿಯೋಗ ಮಾಡುತ್ತಿದ್ದವರು ಇವರೇ ಆಗಿದ್ದರು. ಭೂಮಿಯನ್ನು ದತ್ತಿಯಾಗಿ ಕೊಟ್ಟಿದ್ದರೆ, ಅದನ್ನು ಉಳುಮೆಗೆ ಕೊಡುವುದು, ಅದರಿಂದ ಬರುವ ಆದಾಯವನ್ನುನಿರ್ದಿಷ್ಟ ಧಾರ್ಮಿಕ ಕಾರ್ಯಕ್ಕಾಗಿ ಬಳಸುವುದು ಮಹಾಜನರ ಕರ್ತವ್ಯವಾಗಿದ್ದಿತು. ಮಹಾಜನರು ವಿದ್ವಾಂಸರಾಗಿದ್ದು, ವೇದಾಂಗ ಪಂಡಿತರಾಗಿದ್ದ ಸಂಗತಿಯನ್ನು ಕರ್ನಾಟಕ ನಾಡಿನ ಅನೇಕ ಶಾಸನಗಳು ಉಲ್ಲೇಖಿಸಿವೆ.

ತೆಲಸಂಗದ ಶಾಸನವು ತೆಲಸಂಗ " ಶ್ರೀ ಮನುಮಹಾಗ್ರಹಾರಂ ತೆಲಸಂಗ(ವ)ದ ಮಹಾಜನಂಗಳೆರಡಯ್ಯೂ(ರ್ವ) ಸ್ವಾಮಿಗಳುಂ" ಎಂದು ಮಹಾಜನರ ಸಂಖ್ಯೆಯನ್ನು ಹೇಳಿದೆ. ಕ್ರಿ. ಶ. ೧೧೬೭ರ ರಾಮತೀರ್ಥ ಶಾಸನವು ರಾಮತೀರ್ಥ ಕೊಟ್ಟಲಿಗೆ ಅಗ್ರಹಾರದ ಮಹಾಜನಂಗಳು ಭುಜಬಲ ಚಕ್ರವರ್ತಿ ಬಿಜ್ಜಳದೇವನ ಹೇಳಕೆಯಂತೆ ತೀರ್ಥದ ಸ್ವಯಂಭು ರಾಮೇಶ್ವರ ದೇವರ ಹಾಲುಮಂಡಿಗೆಗೆ ಎರಡು ಮತ್ತರು ಹೊಲವನ್ನು ದಾನನೀಡಿದ್ದನ್ನು ಉಲ್ಲೇಖಿಸಿರುವುದರಿಂದ ಮಹಾಜನಂಗಳು ಕೇವಲ ದಾನವನ್ನು ಸ್ವೀಕಾರಮಾಡುವದಲ್ಲದೆ ದಾನವನ್ನು ಬೀಡುತ್ತಿದ್ದರು ಎಂಬ ಅಂಶ ಸ್ಪಷ್ಟವಾಗುತ್ತದೆ. ಬಾಡಗಿ ಶಾಸನವು ವಾಸಿಷ್ಟಗೋತ್ರ ಉಭಯದರುಶನಾದಿ ಋಗ್ವೇದ ಚೂಡಾಮಣಿ ವಾಜಪೆಯಾಜಿ ಬಸವಣಭಟ್ಟೋಪಾಧ್ಯಾಯರು, ಜಾತವೇದ ಫಳಿಸಾಸ ಆದಿತ್ಯ ಭಟ್ಟರು, ಕಾಶ್ಯಪಗೋತ್ರ, ಚೂಡಾಮಣಿ ನಾಗದೇವ ಭಟ್ಟೋಪಾಧ್ಯಾಯರ ಮಗ ಗೋವಿಂದಭಟ್ಟರನ್ನುಉಲ್ಲೇಖಿಸುತ್ತದೆ.

ಸಮಾಜದಲ್ಲಿ ಉಚ್ಚಸ್ಥಾನವನ್ನು ಹೊಂದಿದ್ದ ಮಹಾಜನರು ಒಂದೊಂದು ಊರಿನ ಪ್ರಭುತ್ವವನ್ನು ಅನುಭವಿಸುತ್ತಿದ್ದ ಸಂಗತಿಯನ್ನು ಬಾಡಗಿ ಶಾಸನವು "ಚಕ್ರಿ ಭಟ್ಟೋಪಾಧ್ಯಯರ ಪುತ್ರರಪ್ಪ ಚೌಡಭಟ್ಟೋಪಾಧ್ಯಯರುಂ ತುಂಗಳ ಮತ್ತು ಬಾಡಗಿಯ ಪ್ರಭುತ್ವ ಅನುಭವಿಸುತ್ತಿರಲು" ಎಂದಿದೆ. ಬ್ರಾಹ್ಮಣರು ರಾಜಕೀಯದಲ್ಲಿ ಪ್ರಮುಖಸ್ಥಾನ ಪಡೆದಿದ್ದರು ಎಂಬುದು ಉಮ್ರಾಣಿ ಶಾಸನದಿಂದ ತಿಳಿಯುತ್ತದೆ. ಅದು ವಿಶ್ವಾಮಿತ್ರಗೋತ್ರದ್ಭುವ ಮಧುವರಸನ ಮಗ ದೇವರಸನು ರಾಯಮುರಾರಿ ಸೋವಿದೇವನ ಪಾದಪದ್ಮೋಪ ಜೀವಿಯಾಗಿದ್ದನೆಂಬುದು ಸ್ಪಷ್ಟಪಡಿಸುತ್ತದೆ. ಇದರಿಂದ ಬ್ರಾಹ್ಮಣರು ಕೇವಲ ಪೌರೋಹಿತ್ಯದಲ್ಲಿ ಮಾತ್ರ ತೊಡಗಿಸಿಕೊಳ್ಳದೆ ರಾಜಕೀಯದಲ್ಲಿಯೂ ಭಾಗವಹಿಸುತ್ತಿದ್ದುದಾಗಿ ತಿಳಿದು ಬರುತ್ತದೆ.

ಬ್ರಾಹ್ಮಣರಿಗೆ ತಮ್ಮದೇ ಆದ ಗೋತ್ರಗಳಿರುತ್ತಿದ್ದವು ಎಂಬ ಅಂಶ ಕಣಂಬಡೆ ನಾಡಿನ ಶಾಸನಗಳಲ್ಲಿಯೂ ಕಾಣಬರುತ್ತದೆ. ಬಾಡಗಿ ಶಾಸನ ವಿಶ್ವಾಮಿತ್ರಗೋತ್ರ ಚೌಡಭಟ್ಟೋಪಾಧ್ಯಾಯ, ವಾಶಿಷ್ಟಗೋತ್ರ ಬಸವಣ್ಣ ಭಟ್ಟೋಪಾಧ್ಯಾಯ, ಬಾದರಾಯಣ ಗೋತ್ರ ಚೌಡಸಾನಿಯ ಪಟ್ಟವರ್ಧ, ಮಹಾಜನರು ಅಗ್ರಹಾರವನ್ನು ಉಪಭೋಗಿಸುತ್ತಿದ್ದರಲ್ಲದೆ ಅನೇಕ ಸಾಮಾಜಿಕ, ಧಾರ್ಮಿಕ ಮತ್ತು ರಾಜಕೀಯ ಕಾರ್ಯಗಳಲ್ಲಿ

ನಿರತರಾಗಿದ್ದ ಅಂಶ ಸ್ಪಷ್ಟವಾಗುತ್ತದೆ. ಇವರು ವಿವಿಧ ದೇವಾಲಯಗಳಗೆ ದಾನ ಬಿಟ್ಟಿದ್ದಾರೆ ಮತ್ತು ಬೇರೆಯವರು ಬಿಟ್ಟ ದತ್ತಿಯನ್ನು ಚ್ಯುತಿ ಬರದ ಹಾಗೆ ಪಾಲಿಸಿದ್ದಾರೆ.

ಅಗ್ರಹಾರಗಳು:

ಸಾಮಾಜಿಕ ವ್ಯವಸ್ಥೆಯಲ್ಲಿ ಅಗ್ರಹಾರಗಳು ಬಹು ವಿಶಿಷ್ಟವಾದ ಸ್ಥಾನವನ್ನಲಂಕರಿಸಿವೆ. ಅಗ್ರಹಾರ – ಅಗ್ರ (ಶ್ರೇಷ್ಠ) + ಆಹಾರ (ಸ್ಥಳ) ಎಂಬೆರಡು ಪದಗಳ ಕೂಡು ಪದವಾಗಿದ್ದು, ಅದರರ್ಥ ಶ್ರೇಷ್ಠರಿಗೆ ಕೊಟ್ಟಿರುವ ಸ್ಥಳ ಎಂದಾಗುತ್ತದೆ. ಇಲ್ಲಿನ ಶ್ರೇಷ್ಠರೆಂದರೆ ಚಾತುವರ್ಣದಲ್ಲಿ ಅಗ್ರರಾದ ಬ್ರಾಹ್ಮಣರು. ಅವರಿಗೆ ದತ್ತಿಯಾಗಿ ಬಿಟ್ಟುಕೊಟ್ಟ ಊರುಗಳೇ ಅಗ್ರಹಾರಗಳು. ಬ್ರಾಹ್ಮಣ ಆದಿಪತ್ಯದ ಈ ಅಗ್ರಹಾರಗಳಲ್ಲಿ ಧಾರ್ಮಿಕ ಕಾರ್ಯಗಳೊಂದಿಗೆ ವಿದ್ಯಾಭ್ಯಾಸವೂ ನಡೆಯುತ್ತಿತ್ತು. ಕೊಕಟನೂರಿನ ಶಾಸನದಲ್ಲಿ ತ್ರೈಪುರುಷದೇವಾಲಯದ ಜೋತೆಗೆ ಶಾಲೆಯನ್ನು ಕಟ್ಟಿಸಿದ್ದು, ದೇವರ ಪೂಜೆ ಪುರಸ್ಕಾರಕ್ಕೆ ದತ್ತಿ ಕೊಡುವಾಗ ಶಾಲೆಯಲ್ಲೋದುವ ವಿದ್ಯಾರ್ಥಿಗಳ ಓದಿಸುವೋಜರ ಮತ್ತು ಮಾಣಿಯರ. ಊಟ ಉಡುಗೆಯ ಸಲುವಾಗಿ ದತ್ತಿಕೊಟ್ಟಿದ್ದನ್ನು ಹೇಳಲಾಗಿದೆ. ತೆಲಸಂಗದ ಶಾಸನದಲ್ಲಿ ಅಗ್ರಹಾರ ತೆಲಸಂಗದಲ್ಲಿ ಭಾಯ್ಯಿದೇವನೆಂಬ ಶೈವಬ್ರಾಹ್ಮಣನು ಪ್ರಸಿದ್ಧನಾಗಿದ್ದು, ಆತನ ಶಿಷ್ಯರಲ್ಲಿ ಮಲ್ಲಿದೇವನು ಬಹಳ ಪ್ರಸಿದ್ಧನಾಗಿದ್ದನು. ಆತನು ಶಿವೈಕ್ಯನು, ವಿಪ್ರರಾಜ ಕುಲದೀಪಕನು ಎಂದು ಸಂಭೋದಿಸಲಾಗಿರುವುದರಿಂದ ಈತನು ಶವಾಗಮಾನುಯಾಯಿ ಬ್ರಾಹಣನಾಗಿದ್ದು, ಬಳಿಕ ಈತನು ಅಲ್ಲಿಯ ಭಾವಸುದ್ಧ ದೇವರಿಗೆ ದತ್ತಿ ಬಿಟ್ಟ ಸಂಗತಿ ಸ್ಪಷ್ಟವಾಗುತ್ತದೆ. ಮುರಗುಂಡಿ ತಾಮ್ರ ಶಾಸನದಲ್ಲಿ ಮಹಾಗ್ರಹಾರ ಸತ್ತತ್ತಿಯ ಎರಡುನೂರ ನಾನಾ ಗೋತ್ರದ ಬ್ರಾಹ್ಮಣರಿಗೆ ಮತ್ತು ನರಸಿಂಹದೇವರ ಅಂಗಭೋಗ, ರಂಗಭೋಗ ಮತ್ತು ಖಂಡಸ್ಫುಟಿತ ಜೀರ್ಣೋದ್ಧಾರಕ್ಕಾಗಿ ದತ್ತಿ ಬಿಟ್ಟ ವಿಷಯ ಉಲ್ಲೇಖಗೊಂಡಿದೆ.

ಶ್ರಮಿಕ ವರ್ಗ:

ಅಥಣಿ ನಾಡಿನಲ್ಲಿ ಬೇರೆ ಬೇರೆ ವೃತ್ತಿಗಳನ್ನು ಮಾಡುವ ಕುಶಲಕರ್ಮಿಗಳಾದ ಬಣಜಿಗ, ಬಡಿಗ, ನಾವದಿಗ, ಕುಂಬಾರ, ಕಲ್ಲುಕುಟಿಗ, ಗಾಣಿಗ ಮುಂತಾದ ಶ್ರಮಿಕ ವರ್ಗದವರನ್ನು ಶಾಸನಗಳು ಉಲ್ಲೇಖಿಸುತ್ತವೆ.ಯಂಕ್ಕಂಚಿ ಶಾಸನವು ಬಡಗಿ ಚಂಪೋಜನಿಗೆ ಮನ್ನೆಯ ಎಂಟು ಹಿಟ್ಟು ಸ್ಥಾನಮಾನ ಸಹಿತವಾಗಿ ಆರುಕೆಯ್ಯ ದತ್ತಿ ಬಿಟ್ಟಿದ್ದನ್ನು ಪ್ರಸ್ತಾಪಿಸುತ್ತದೆ. ಕ್ಷೌರದ ಕೆಲಸ ಮಾಡುವವರು ನಾವಿದರು. ಉಮ್ರಾಣಿಶಾಸನದಲ್ಲಿ ಕಲ್ಲಿಸೆಟ್ಟಿ ಬ್ರಾಹ್ಮಣರಿಗೆ ದಾನವನ್ನು ಬಿಡುವಾಗ ನಾವಿದರ ಕೆಯ್ಯಯ ಪಕ್ಕದಲ್ಲಿ ಭೂಮಿಯನ್ನು ಕ್ರಯಗೊಂಡು ದತ್ತಿ ಬಿಟ್ಟ ವಿಷಯ ಪ್ರಸ್ತಾಪಿತಗೊಂಡಿದೆ. ವಜ್ರವಾಡ ಶಾಸನ ಶಿವಾಲಯ ಮಾಡಿದ ಜೀರನಾಣೆಯನ್ನು ಕುರಿತು ಹೇಳಿದೆ. ಈತ ಅಲ್ಲಿನ ಶಿಲ್ಪಿಯಾಗಿರಬೇಕು. ಕುಂಬಾರರ ಕುರಿತ ಉಲ್ಲೇಖ ಕೊಕಟನೂರ ಶಾಸನದಲ್ಲಿ ಬಂದಿದೆ. ಗಾಣದಿಂದ ಎಣ್ಣೆ ತೆಗೆಯುವವರನ್ನು ತೆಲ್ಲಿಗರೆಂದು ಕರೆಯಲಾಗಿದೆ. ಇವರು ಕಟ್ಟಿಕೊಂಡ ಸಂಘವೇ ತೆಲ್ಲಿಗರಯ್ಯೊತ್ತಕ್ಕೆಲು ಈ

ನಾಡಿನ ಬಳ್ಳಗೇರಿ ಶಾಸನವು ತೆಲ್ಲಿಗರ ಐವತ್ತೊಕ್ಕಲು ಕುರಿತು ಉಲ್ಲೇಖಿಸುತ್ತದೆ. ಭೂವ್ಯವಸಾಯ ಮಾಡುವವರು ಒಕ್ಕಲಿಗರು. ಇವರು ತಮ್ಮ ಸೌಕರ್ಯ ಮತ್ತು ಸ್ವಹಿತ ರಕ್ಷಣೆಗಾಗಿ ಒಂದೊಂದುರಿಗೆ ಪ್ರತ್ಯೇಕವಾದ ಸಂಘವನ್ನು ಕಟ್ಟಿಕೊಂಡಿದ್ದರು. ಇವುಗಳನ್ನು ಶಾಸನದಲ್ಲಿ ಅರವತ್ತೊಕ್ಕಲು ಎಂದು ಕರೆಯಲಾಗಿದ್ದು ಈ ನಾಡಿನ ಅಡಹಳ್ಳಿ ಶಾಸನದಲ್ಲಿ ಒಕ್ಕಲಿಗರ ಸಂಘಗಳ ಕುರಿತ ಉಲ್ಲೇಖವಿದೆ. ಆದರೂ ಒಂದು ಶಾಸನದಲ್ಲಿ ಅರವತ್ತೊಕ್ಕಲು ಮತ್ತೊಂದು ಶಾಸನದಲ್ಲಿ ಐವತ್ತೊಕ್ಕಲು ಎಂದು ಕರೆದಿರುವುದು ಹೀಗೆ ಹೇಳಲು ಸಂದೇಹಕ್ಕೆಡೆಮಾಡಿಕೊಡುತ್ತದೆ. ದೇವರ ಪೂಜೆಗಾಗಿ ಮಾಲೆಯನ್ನು ಕಟ್ಟುವವರು ಮಾಲೆಗಾರರು, ಮಾಲೆಗಾರರ ಕುರಿತ ಉಲ್ಲೇಖ ಈ ನಾಡಿನ ಬಿಳೂರ ಶಾಸನದಲ್ಲಿ ಬಂದಿದೆ.ದಾನದತ್ತಿ ಬಿಡುವಾಗ ಎಂಟುಹಿಟ್ಟು, ಮೂಲಿಗ ಪರಿಗ್ರಹ ಮುಂತಾದ ಪಾರಿಭಾಷಿಕ ಪದಗಳು ಬಳಕೆಯಾಗಿರುವುದು ವಿವಿಧ ಶಾಸನಗಳಿಂದ ಸ್ಪಷ್ಟವಾಗುತ್ತದೆ. ಎಂಟು ಹಿಟ್ಟು ಕೆಲವು ಶಾಸನಗಳಲ್ಲಿ ಹನ್ನಿಟ್ಟು, ಹಿಟ್ಟು, ಹಿಟ್ಟುದೆರೆ ಎಂದು ಬಳಕೆಯಾದರೆ ಮತ್ತೆ ಕೆಲವು ಶಾಸನಗಳಲ್ಲಿ ಹಿಟ್ಟುಕಾರ, ಹಿಟ್ಟಿನ ಎಂಬ ವಿಶೇಷ ರೂಪಗಳೂ ಬಳಸ್ಪಟ್ಟಿವೆ. ಹಿಟ್ಟು ಎಂಬ ಪದಕ್ಕೆ ಕಿಟ್ಟೆಲ್‌ರ ಕನ್ನಡ ಇಂಗ್ಲೀಷ್ ನಿಘಂಟುವಿನಲ್ಲಿ 'ಆಹಾರ'ಎಂದು ಅರ್ಥವಿದೆ. ಅಂದರೆ ವೃತ್ತಿಕಾರರಿಗೆ ಅವರ ಸೇವೆಯ ಪ್ರತಿಪಲವಾಗಿ ಆಹಾರಧಾನ್ಯ ಅಂದರೆ ಹಿಟ್ಟನ್ನು ಕೊಡುತ್ತರಬೇಕು. ಯಂಕ್ಕಂಚಿ ಶಾಸನದಲ್ಲಿ ಅರಮನೆಯಲ್ಲಿ ಕೆಲಸ ಮಾಡುವವನಿಗೆ ಶ್ರೀ ಕಲಿದೇವರ ಸನ್ನಿದಾನದಲ್ಲಿ ಹಿಟ್ಟು ಹಾಸಿ ಕೊಟ್ಟರು ಎಂಬ ಉಲ್ಲೇಖಬರುತ್ತದೆ. ಇದು ಪ್ರಾಚೀನ ಕಾಲದಿಂದಲೂ ರೂಢಿಯಲ್ಲಿರುವ ಇಂದಿನ ಆಯಗಾರ ಪದ್ಧತಿಯನ್ನು ಹೋಲುತ್ತದೆ. ದಾನ ಬಿಡುವ ಮತ್ತು ಪ್ರತಿಪಾಲಿಸುವ ಸಂದರ್ಭಗಳಲ್ಲಿ ಸ್ಥಾನಮಾನ್ಯರೋಂದಿಗೆ ಇದರ ಎಂಟು ಸದಸ್ಯರು ಹಾಜರು ಇಲ್ಲದ ಕಾಲದಲ್ಲಿಯೂ 'ಎಂಟು ಹಿಟ್ಟು' ಎಂದು ಶಾಸನಗಳು ಕರೆದಿರುವುದು ಅದರ ಸಾಂಘಿಕ ಸ್ವರೂಪವನ್ನು ಸೂಚಿಸುತ್ತದೆ. ಕಣಂಬಡೆ ನಾಡಿನ ಬಳ್ಳಗೇರಿ, ಯಂಕ್ಕಂಚಿ ಕೊಕಟನೂರು ಅಡಹಳ್ಳಿ ಗ್ರಾಮಗಳಲ್ಲಿ ಎಂಟು ಹಿಟ್ಟುಗಳಿದ್ದ ಉಲ್ಲೇಖ ಅಲ್ಲಿನ ಶಾಸನಗಳಿಂದ ಸ್ಪಷ್ಟವಾಗುತ್ತದೆ.ಎಂಟುಹಿಟ್ಟುಗಳೊಂದಿಗೆ ಬಳಕೆಯಾಗುವ ಮತ್ತೊಂದು ಪದ ಮೂಲಿಗ, ಮೂಲಿಗ ಎನ್ನುವುದು ವಂಶಪಾರಂಪರ್ಯದಿಂದ ಮುಂದುವರಿದುಕೊಂಡು ಬಂದ ಊರಿನ ಮುಖ್ಯಸ್ಥಾನವನ್ನು ಸೂಚಿಸುತ್ತದೆ. ಮೂಲಿಗರ ಕುರಿತು ಉಲ್ಲೇಖ ಈ ನಾಡಿನ ಕೊಕಟನೂರ ತೆಲಸಂಗ ಉಮ್ರಾಣಿ ತುಂಗಳ ಶಾಸನಗಳಲ್ಲಿ ಬರುತ್ತದೆ.

**ಕೌಟುಂಬಿಕ ವ್ಯವಸ್ಥೆ:**

ಕೌಟುಂಬಿಕ ವ್ಯವಸ್ಥೆಯಲ್ಲಿ ಪುರುಷ ಮತ್ತು ಮಹಿಳೆಯರು ಪ್ರಮುಖ ಸ್ಥಾನವನ್ನು ಹೊಂದಿರುತ್ತಾರೆ. ಹೆಣ್ಣು-ಗಂಡುಗಳ ಪರಸ್ಪರ ಹೊಂದಾಣಿಕೆಯ ಮನೋಭಾವದಿಂದ ಕೂಡಿದ ವ್ಯವಸ್ಥೆಯೇ ಕುಟುಂಬ. ಈ ವ್ಯವಸ್ಥೆಯಲ್ಲಿ ವಿವಾಹದ ಮೂಲಕ ಗಂಡು ಹೆಣ್ಣಿನ

ಸಂಬಂಧಗಳು ಒಂದು ಒಪ್ಪಿತ ಪದ್ಧತಿಯಾಗಿದೆ. ಹೀಗಾಗಿ ಕುಟುಂಬವು ವಿವಾಹ-ರಕ್ತ ಸಂಬಂಧ ಅಥವಾ ದತ್ತು ಸ್ವೀಕಾರದ ಸಂಬಂಧಗಳಿಂದ ಒಂದುಗೂಡಿದ ಮತ್ತು ನಿವಾಸವೊಂದರಲ್ಲಿ ವಾಸಿಸುತ್ತಾ ಗಂಡ ಹೆಂಡತಿ, ತಂದೆ-ತಾಯಿ, ಮಗ-ಮಗಳು, ಅಕ್ಕ - ತಂಗಿ ಇವೇ ಮುಂತಾದ ಸಾಮಾಜಿಕ ಸಂಬಂಧಗಳೊಂದಿಗೆ ಪರಸ್ಪರ ಒಡನಾಟ ಹಾಗೂ ಸಂವಹನ ನಡೆಸುತ್ತಾ ತಮ್ಮದೇ ಆದ ಸಾಮ್ರಾಜ್ಯ ಸಂಸ್ಕೃತಿಯನ್ನು ಸೃಷ್ಟಿಸುವ ವ್ಯಕ್ತಿಗಳ ಸಮೂಹವಾಗಿದೆ. ಹೀಗಾಗಿ ಕುಟುಂಬವನ್ನು ಸಮಾಜವೆಂದು ಕರೆಯಬಹುದಾಗಿದೆ.

**ವಿವಾಹ:**

ವಿವಾಹ ಒಂದು ಪ್ರಮುಖವಾದ ಹಾಗೂ ಸಾರ್ವತ್ರಿಕ ಸ್ವರೂಪದ ಸಾಮಾಜಿಕ ಸಂಸ್ಥೆ. ಗಂಡು ಹೆಣ್ಣಿನ ಚಂದ್ರಬಲ, ತಾರಾಬಲಗಳ ರಾಶಿಕೂಟ ಗಣಗಳ ಸಂಬಂಧ ನೋಡಿ ಶುಭಲಗ್ನ ನಿರ್ಧರಿಸುತ್ತಿದ್ದುದ್ದನ್ನೂ ವಿಶೇಷವಾಗಿ ನಿರ್ಮಿಸಲಾದ ಚಪ್ಪರದಲ್ಲಿ ನಿಬ್ಬಣದ ಮಧ್ಯೆ ಶಾಸ್ತ್ರೋಕ್ತವಾಗಿ ವಿವಾಹ ನೇರವೇರುತ್ತಿದ್ದುದನ್ನೂ ವಚನಕಾರರ ವಚನಗಳ ಹಿನ್ನಲೆಯಲ್ಲಿ ಗಮನಿಸಿರುವ ಎಸ್.ಕೆ.ಕೊಪ್ಪಾರವರ ಹೇಳಿಕೆ ಇಲ್ಲಿ ಪ್ರಸ್ತುತವೆನಿಸುತ್ತದೆ. ಶಾಸನಗಳಲ್ಲಿ ವಿವಾಹದ ವರ್ಣನೆ ಮತ್ತು ಸಾಮಾನ್ಯ ಜನರ ಮದುವೆ ಕುರಿತ ವಿವರಣೆ ಕಂಡುಬರುವುದಿಲ್ಲ. ಆದರೆ ಅರಸು ಮನೆತನಗಳು ಅರಸು ಮನೆತನದೊಂದಿಗೆ ಸಂಬಂಧ ಬೆಳೆಸಿರುವುದು ಮತ್ತು ರಾಜಕೀಯ ಉದ್ದೇಶಕ್ಕಾಗಿ ಸಾಮಂತ ಮಾಂಡಲಿಕ, ದಂಡನಾಯಕರುಗಳೊಂದಿಗೆ ವಿವಾಹ ಸಂಬಂಧ ಬೆಳೆಸಿರುವ ಸಂಗತಿಗಳನ್ನು ಶಾಸನಗಳು ಸ್ಪಷ್ಟಪಡಿಸುತ್ತವೆ. ಕಣಂಬಡೆ ನಾಡಿನ ವಳಸಂಗ ಶಾಸನ ಆರನೇ ವಿಕ್ರಮಾದಿತ್ಯನ ಹೆಂಡತಿ ಅಭಿನವ ಶಾರದೆ ಚಂದಲದೇವಿಯು ಬಿಜ್ಜಳನ ಮುತ್ತಬ್ಬೆಯೆಂದು ಹೇಳುತ್ತದೆ. ಕಲಚುರಿ ಜೋಗಮನ ಮಗಳಾದ ಸಾವಳದೇವಿಯನ್ನು ವಿಕ್ರಮಾದಿತ್ಯ ಮದುವೆಯಾದರೆ ವಿಕ್ರಮಾದಿತ್ಯನ ಮಗಳಾದ ಅಂದರೆ ಚಂದಲದೇವಿಯ ಮಗಳನ್ನು ಜೋಗಮನ ಮಗ ಪೆರ್ಮಾಡಿ ಮದುವೆಯಾಗಿದ್ದುದು ಈಗ ಸ್ಪಷ್ಟವಾಗಿದೆ. ಹೀಗಾಗಿ ಈ ಚಂದಲದೇವಿಯ ಮಗಳ ಮಗನೇ ಬಿಜ್ಜಳ ಎಂಬ ಅಂಶವನ್ನು ಗಮನಿಸಬಹುದಾಗಿದೆ. ಇದರಿಂದ ವಿವಾಹ ಸಂಬಂಧಗಳು ರಾಜ ಮತ್ತು ಮಂಡಳೇಶ್ವರರ ನಡುವೆ ನಡೆಯುತ್ತಿದ್ದುದಾಗಿ ತಿಳದುಬರುತ್ತದೆ.

**ಮಹಿಳೆ:**

ಪ್ರಾಚೀನ ಕಾಲದಿಂದಲೂ ಮಹಿಳೆ ಪೂಜ್ಯ ಸ್ಥಾನದಲ್ಲಿರುವುದು ಕಂಡುಬರುತ್ತದೆ. ಮಾತೃದೇವತೆಗಳ ಪೂಜೆ ನಡೆಯುತ್ತಿದ್ದ ಹಾಗೂ ಮಾತೃಪ್ರಧಾನ ಕುಟುಂಬ ವ್ಯವಸ್ಥೆ ಜಾರಿಯಲ್ಲಿದ್ದ ಸಿಂಧೂ ನದಿ ತೀರದ ಸಂಸ್ಕೃತಿಯಲ್ಲಿಯೂ ವೇದಗಳ ಕಾಲದಲ್ಲಿಯ ಮಹಿಳೆಯರ ಸ್ಥಾನಮಾನಗಳು ಊರ್ಜಿತವಾಗಿಯೇ ಇದ್ದವು. ಋಗ್ವೇದದ ಮಂತ್ರ ದ್ರಷ್ಟಾರರಲ್ಲಿ ಪುರುಷರಂತೆ ಮಹಿಳೆಯರೂ ಇದ್ದರು. ಸಾಮವೇದದಲ್ಲಿ ಇಂಥ ಹಲವಾರು ಮಹಿಳೆಯರು ಕಂಡುಬರುತ್ತಾರೆ. ಈ ಕಾಲದಲ್ಲಿ ಉಚ್ಚವರ್ಗಗಳ ಮಹಿಳೆಯರಿಗೆ

ಉಪನಯನ ಕೂಡ ಮಾಡಲಾಗುತ್ತಿತ್ತು. ವಿದುಷಿಯರಾದ ಮಹಿಳೆಯರು ಅಧ್ಯಾಪನ ವೃತ್ತಿ ಅವಲಂಬಿಸಿದವರಾಗಿದ್ದರು. ಆದರೂ ವೇದಗಳ ಕಾಲದಲ್ಲಿ ನಿಧಾನವಾಗಿ ಗಂಡಿಗೆ ಪ್ರಾಶಸ್ತ್ಯ ದೊರೆಯತೊಡಗಿತ್ತು. ಪಿತೃಪ್ರಧಾನ ಕುಟುಂಬ ಜಾರಿಯಲ್ಲಿ ಬಂದಿತು. ಅಥರ್ವಣ ವೇದದಲ್ಲಿ ಪುತ್ರ ಸಂತಾನಕ್ಕಾಗಿ ಮಾಡುತ್ತಿದ್ದ ವಿಧಿಗಳು ಹೇಳಲ್ಪಟ್ಟಿವೆ. ಬ್ರಹದಾರಣ್ಯಕ ಉಪನಿಷತ್ತಿನಲ್ಲಿ ಮಾತ್ರ ಪಾಂಡಿತ್ಯ ಪೂರ್ಣ ಮಗಳ ಜನನಕ್ಕಾಗಿ ಪ್ರಾರ್ಥಿಸುವ ವ್ರತಾಚರಣೆ ಹೇಳಲಾಗಿದೆ. ದಾನ ಮಾಡುವಾಗ ಪುರುಷ ತಾನೊಬ್ಬನೇ ದಾನ ಮಾಡದೆ ಮಡದಿಯ ಸಮ್ಮತಿಯೊಂದಿಗೆ ಇಲ್ಲವೆ ಅವಳೊಡಗೂಡಿ ದಾನ ಕೈಕೊಳ್ಳುವಂತೆ ಧರ್ಮಶಾಸ್ತ್ರಗಳು ತಿಳಿಸುತ್ತವೆ. ಈ ನಾಡಿನ ಕೊಕಟನೂರು ಶಾಸನವು ತ್ರೈಲೋಕ್ಯಮಲ್ಲದೇವನ ಮಹಾಮಂಡಳೇಶ್ವರ ಜೋಗಪಯ್ಯರಸನು ತನ್ನ ಅರಸಿಯಾದ ಪೊಲ್ಲಿಕಬ್ಬೆಯೊಂದಿಗೆ ಕೂಚಸೆಟ್ಟಿ ಮಾಡಿಸಿದ ಕೊಕಟನೂರಿನ ತ್ರೈಪುರುಷದೇವರಿಗೆ ಜನ್ನವಾಡ ಗ್ರಾಮವನ್ನು ದತ್ತಿಯಾಗಿ ಬಿಟ್ಟಿದ್ದನ್ನು ಉಲ್ಲೇಖಿಸುವಾಗ ಅರಸಿ ಪೊಲ್ಲಿಕಬ್ಬೆಯನ್ನು

**ಜನಕಜೆ ಪಾಟಿ ಹೇಮವತಿ – ರೋಹಿಣಿ ತತ್ಸರೂಪೆವಾ**
**ಗ್ವನಿತಿ ಸಮಂ ತಿಳೋತ್ತಮೆ ಸಮಾನಮರುನ್ಧತಿ ಮಿಕ್ಕ ಪೋಲ್ವಿಗೊ**
**ಮಿನಿ ದೊರೆ ಸತ್ಯಭಾಮ ಸರಿ ರೇಣುಕಿ ಮನ್ಮಥ ಪ್ರಿಯಾಂ**
**ಗನೆ ದೊರೆಯೆಂಬುದೆಂಬುದು ಪೆಬಿರ್ದ್ದೊರೆಯೆಂಬುದೆ ಪೊಲ್ಲಕಬ್ಬೆಯೊಳ್**

ಎಂದು ವರ್ಣಿಸಿದ್ದನ್ನು ಗಮನಿಸಿದರೆ ಮಹಿಳೆಯನ್ನು ದೇವತೆಗಳ ಸಮಾನ ಎಂದು ಪರಿಗಣಿಸುತ್ತಿದ್ದ ವಿಷಯ ಸ್ಪಷ್ಟವಾಗುತ್ತದೆ. ಮಹಿಳೆಯು ದಾನದತ್ತಿಕಾರ್ಯ ಮತ್ತು ದೇವಾಲಯ ನಿರ್ಮಾಣ ಮಾಡಿದ್ದನ್ನು ಉಮ್ರಾಣಿ ಶಾಸನವು ಉಲ್ಲೇಖಿಸುತ್ತದೆ. ಅದು ಆರನೆಯ ವಿಕ್ರಮಾದಿತ್ಯನ ಮಹಾಮಂಡಳೇಶ್ವರ ಹೆಮ್ಮಾಡಿಯರಸನ ಪಟ್ಟಮಹಿಸಿ ಚಂದಲದೇವಿ ಮತ್ತು ಕುಮಾರ ಜಯಸಿಂಹದೇವರು ತಾವು ಮಾಡಿಸಿದ ಹೆಮ್ಮೇಶ್ವರ ದೇವಾಲಯಕ್ಕೆ ಜನ್ನವಾಡ ಗ್ರಾಮದತ್ತಿ ಬಿಟ್ಟಿದ್ದನ್ನು ಹೇಳುತ್ತದೆ. ಉಮ್ರಾಣಿಯ ಮತ್ತೊಂದು ಶಾಸನದಲ್ಲಿ ಸ್ತ್ರೀಯರ ಹೆಸರಿನಲ್ಲಿ ಅಂದರೆ ಹೆಮ್ಮಾಡಿರಸನ ಪಟ್ಟಮಹಿಸಿ ಚಂದಲದೇವಿಯ ಹೆಸರಿನಲ್ಲಿ ಚಂದಲೇಶ್ವರ ದೇವಾಲಯ ಕಟ್ಟಿಸಿ ಅದಕ್ಕೆ ದತ್ತಿ ಬಿಟ್ಟಿದ್ದನ್ನು ಸ್ಪಷ್ಟಪಡಿಸುತ್ತದೆ. ತೆಲಸಂಗ ಶಾಸನವು ಸೆಟ್ಟಿಬೊಮ್ಮನ ಸತಿ ಅಕ್ಕಣಬ್ಬೆಯನ್ನು ಸತಿಪತಿಭಕ್ತೆ, ಸದ್ಧರ್ಮ್ಮ ಮೂರ್ತಿ ಗುಣಯುತೆ, ಸೀತೆಗೆ ಪಡಿ, ರೂಡಿಯ ಗಿರಿಜಾತೆಗೆ ದೊರೆ ಯಕ್ಕಣಬ್ಬೆ ಎಂದು ಉಲ್ಲೇಖಿಸಿದೆ. ಹೀಗೆ ಮಹಿಳೆಯರು ದಾನದತ್ತಿಕಾರ್ಯ ಮತ್ತು ದೇವಾಲಯ ನಿರ್ಮಾಣದಂತಹ ಕಾರ್ಯದಲ್ಲಿ ತೊಡಗಿಸಿಕೊಂಡು ಸಮಾಜದಲ್ಲಿ ಗವರವಯುತ ಸ್ಥಾನ ಹೊಂದಿದ್ದರು.

**ಬಹುಪತ್ನಿತ್ವ:**

ಪ್ರಾಚೀನ ಕಾಲದಲ್ಲಿ ಸಮಾಜವು ಬಹುಪತ್ನಿತ್ವವನ್ನು ಮಾನ್ಯ ಮಾಡುತ್ತಿತ್ತು. ಆದರೆ ಜನಸಾಮಾನ್ಯರನ್ನು ಹೊರೆತು ಪಡಿಸಿ ರಾಜ ಮಹಾರಾಜರು ಮಂಡಳೇಶ್ವರರು, ಸಾವಂತರು

ಮಾತ್ರ ಬಹುವಲ್ಲಭರಾಗಿದ್ದರು. ಆರನೆಯ ವಿಕ್ರಮಾದಿತ್ಯನಿಗೆ ೧೬ ಜನ ರಾಣಿಯರು ಇದ್ದುದಾಗಿ ತಿಳಿಯುತ್ತದೆ. ಸಾಮಾನ್ಯವಾಗಿ ಹಿರಿಯ ಅರಸಿಯನ್ನು ಪಟ್ಟ ಮಹಿಸಿ, ಪಿರಿಯರಸಿ, ಅಗ್ರಮಹಿಷಿ ಎಂದು ಕರೆದುದು ಕಂಡು ಬರುತ್ತದೆ.

**ಆಹಾರ ಪಾನೀಯಗಳು:**

ನಮ್ಮ ಪೂರ್ವಜರು ವಿವಿಧ ಕಲೆಗಳಲ್ಲಿ ಪರಿಣತಿ ಹೊಂದಿದಂತೆ ಪಾಕಶಾಸ್ತ್ರದಲ್ಲಿಯೂ ಹೊಂದಿದ್ದರು. ನಳ, ಭೀಮಸೇನರು ಪಾಕವಿದ್ಯಾ ಪ್ರವೀಣರಾಗಿದ್ದು, ಅವರ ಹೆಸರುಗಳಲ್ಲಿ ಪಾಕಶಾಸ್ತ್ರಗಳೇ ರಚಿತವಾಗಿವೆ. ಕನ್ನಡದಲ್ಲಿ ಎರಡನೇಯ ಸೋಮೇಶ್ವರನ ಮಾನಸೊಲ್ಲಾಸ, ಎರಡನೆಯ ಚಾವುಂಡರಾಯನ ಲೋಕೋಪಕಾರಗಳಲ್ಲಿ ಪಾಕಶಾಸ್ತ್ರಕ್ಕೆ ಸಂಬಂಧಿಸಿದ ಭಾಗಗಳಿವೆ. ಕನ್ನಡ ನಾಡಿನ ಮೀಸಲಡಿಗೆಗಳಾದ ಮಂಡಕ (ಮಂಡಿಗೆ) ದೊಸಕ (ದೋಸೆ) ಇದ್ದಲಕ (ಇಡ್ಡಲಿಗೆ) ಸೇವಿಕಾ (ಸೇವಗೆ) ಮಜ್ಜಿಕಾ (ಮಜ್ಜಿಗೆ)ಗಳನ್ನು, ಹುಳಿಗಾಗಿ ಬಳಸುವ ಹುಣಸೆ, ಕವಳಿ, ಅಂಬಟೆಕಾಯಿ, ಲಿಂಬೆ, ಮಂಗರವಳ್ಳಿಗಳನ್ನು, ಖಾರಕ್ಕಾಗಿ ಬಳಸುವ ಶುಂಠಿ, ಮೆಣಸು, ಕಾರ ಗೆಣಸುಗಳನ್ನು ಎರಡನೆಯ ಸೋಮೇಶ್ವರ ತನ್ನ ಮಾನಸೊಲ್ಲಾದಲ್ಲಿ ಹೆಸರಿಸಿದ್ದಾನೆ.

ಅಥಣಿ ನಾಡಿನ ಶಾಸನಗಳಲ್ಲಿ ಆಹಾರ ಪಾನೀಯ ಕುರಿತು ನೇರವಾದ ಉಲ್ಲೇಖಗಳಿಲ್ಲದಿದ್ದರೂ ದಾನ ಬಿಡುವ ಮತ್ತು ವ್ಯಾಪಾರದ ಸಂದರ್ಭಗಳಲ್ಲಿ ದವಸ – ಧಾನ್ಯಗಳ ಕಾಯಿಬಾಡುಗಳ ಪ್ರಸ್ತಾಪ ವಿವಿಧಡೆಗೆ ಬಂದಿದೆ. ದೇವರ ಉತ್ಸವ, ಹಬ್ಬದ ದಿನಗಳಲ್ಲಿ ವಿಶೇಷ ಅಡುಗೆಯ ವ್ಯವಸ್ಥೆ ನಡೆಯುತ್ತಿದ್ದಂತೆ ಕಂಡು ಬರುತ್ತದೆ. ಕೊಕಟನೂರ ಶಾಸನದಲ್ಲಿ ಕೊಕಟನೂರ ಹಾಲು ಮಂಡಿಗೆಗೆ ಮ.೧೮ ಪಾಯಸಗೆಯಿ ಮ.೪ ದತ್ತಿ ಬಿಟ್ಟದ್ದನ್ನು ನಿರೂಪಿಸಿದೆ.

ಭಾರತೀಯರ ಜೀವನದಲ್ಲಿ ವೀಳ್ಯ ಬಹಳ ಪ್ರಾಚೀನ ಕಾಲದಿಂದಲೂ ಹಾಸುಹೊಕ್ಕಾಗಿದೆ. ದೇವಾಲಯಕ್ಕೆ ಬಿಡುವ ದಾನಗಳಲ್ಲಿ ದೇವರಿಗೆ ನಡೆಸುವ ಸೇವೆಗಳಲ್ಲಿ ವೀಳೆ, ಅಡಕೆಯೂ ಒಂದು. ವಿಳೆಯದ ಮಾನ್ಯದ ಅಂಗಡಿಗುಡಿ ನಿವೇಶನ ಬಿಟ್ಟುದನ್ನು ಕೊಕಟನೂರ ಶಾಸನ ತಿಳಿಸುತ್ತದೆ. ಕಣಂಬಡೆ ನಾಡಿನ ತುಂಗಳ ಶಾಸನದಲ್ಲಿ " ಗೌಡರು ತಮ್ಮ ತೋಟದಲೆರಡು ಗಿಡ, ಹೂವು, ಕಾಯ, ಬದನೆಕಾಯಿ, ಹೀರೆಕಾಯಿ, ಹಾಗಲಕಾಯಿ, ಸೌತೆಕಾಯೆರಡು ಅಲ್ಲಿಯ ದೇವರ ಚೈತ್ರಕಂ ಹಾಗೂ ಪವಿತ್ರಕ್ಕೆ ಹಾಗವಂ ವರುಷಂಪ್ರತಿ ದತ್ತಿ ಬಿಟ್ಟರು ಎಂದು ಬಾಡುಕಾಯಿಗಳನ್ನು ಹೆಸರಿಸಿದೆ."

**ಸಾರ್ವಜನಿಕ ಚಟುವಟಿಕೆಗಳು:**

ಮನುಷ್ಯನ ಎಲ್ಲ ಚಟುವಟಿಕೆಗಳಿಗೆ ಧರ್ಮವು ಪ್ರೇರಣೆಯನ್ನು ನೀಡುತ್ತದೆ. ಹೀಗಾಗಿ ಆತ ತನ್ನ ಲೌಕಿಕ ಕಾರ್ಯದ ಜೊತೆಗೆ ಧಾರ್ಮಿಕ ಕಾರ್ಯಗಳನ್ನು ಮಾಡುತ್ತಿದ್ದ ಸಂಗತಿ

ವಿವಿಧ ಶಾಸನಗಳಿಂದ ಉಕ್ತವಾಗುತ್ತದೆ. ಧಾರ್ಮಿಕ ಕಾರ್ಯಮಾಡಿ ಪುಣ್ಯ ಸಂಪಾದಿಸುವುದು ಮಾನವನ ಗುರಿ. ಹೀಗಾಗಿ ಅನೇಕ ದೇವಾಲಯ, ಬಾವಿ, ಕೆರೆ, ಕಟ್ಟೆ, ಆಗಾಮಗಳು ನಿರ್ಮಾಣಗೊಂಡುದಲ್ಲದೆ ಅವುಗಳ ಸುವ್ಯವಸ್ಥೆಯ ಕಾರ್ಯವು ಮುಂದುವರಿಯಿತು. ಹೀಗಾಗಿ ಕನ್ನಡಿಗರ ಔದಾರ್ಯ ಮುಖ್ಯವಾಗಿ ಪ್ರಕಟವಾಗಿರುವುದು ಒಂದು ದೇವಸ್ಥಾನ ನಿರ್ಮಾಣದಲ್ಲಿ. ಮತ್ತೊಂದು ತಟಾಕ ನಿರ್ಮಾಣದಲ್ಲಿ ಎಂಬ ಮಾತು ಸುಳ್ಳಲ್ಲ.

ವ್ಯಕ್ತಿಯು ತನ್ನ ಹೆಸರಿನಲ್ಲಿ ಕೆರೆಯನ್ನು ಕಟ್ಟಿಸಿ ಅದರ ಜೀರ್ಣೋದ್ಧಾರಕ್ಕಾಗಿ ದತ್ತಿ ಬಿಟ್ಟಿದ್ದನ್ನು ಅಥಣಿ ತಾಲೂಕಿನ ನಾಡಿನ ತೆಲಸಂಗದ ಶಾಸನವು ಕಂಕಣವು ಕೇತನು ಕಲ್ಲಕೆರೆಯನ್ನು ಕಟ್ಟಿಸಿ, ಅದರ ಖಂಡಸ್ಫುಟಿತಜೀರ್ಣೋದ್ಧಾರಕ್ಕಾಗಿ ದತ್ತಿ ಬಿಟ್ಟಿದ್ದನ್ನು ಪ್ರಸ್ತಾಪಿಸುತ್ತದೆ. ಕೆರೆಯ ಸಂರಕ್ಷಣೆಗಾಗಿ ತೆಲಸಂಗದ ಮಹಾಜನರುಗಳು ಇದೆ ಕೆರೆಗೆ ದತ್ತಿ ಬಿಟ್ಟ ಸಂಗತಿಯೂ ಅಲ್ಲಿದೆ. ತೆಲಸಂಗ ಬಳ್ಳಿಗೇರಿ ಶಾಸನದಲ್ಲಿಯ ವಿಶಾಲವಾದ ಬಳ್ಳಿಗೇರಿಯ ಕೆರೆಯನ್ನು ವರ್ಣಿಸಿ ಅದಕ್ಕೆ ದಾನ ಬಿಟ್ಟಿದ್ದನ್ನು ವಿವರಿಸಿದೆ. ಉಮ್ರಾಣಿ ಶಾಸನದಲ್ಲಿ ಚಕ್ರವರ್ತಿ ಬಿಜ್ಜಳನ ಮಹಾಮಂಡಳೇಶ್ವರ ಪಾವಿನ ಪೆರ್ಮಾಡಿಯು ಉಂಬರವಾಣಿಯನ್ನು ಆಳುತ್ತಿದ್ದಾಗ ಶ್ರೇಷ್ಠ ಕಲ್ಲಿಸೆಟ್ಟಿ ತನ್ನ ಧನವನ್ನು ಬಾವಿ, ಅರವಟ್ಟಿಗೆ, ಉದ್ಯಾನ ಇವುಗಳಲ್ಲಿ ವಿನಯೋಗಿಸಿ ಧನ್ಯನಾಗಿದ್ದನು ಎಂದು ಹೇಳಿದೆ.

ಪ್ರಯಾಣಿಕರ ಅನುಕೂಲಕ್ಕಾಗಿ ಮಾರ್ಗಮಧ್ಯೆ ಅರವಟ್ಟಿಗೆಗಳಿರುತ್ತಿದ್ದವು. ಪ್ರವಾಸಿಗರಿಗೆ ಅರವಟ್ಟಿಗೆಗಳಲ್ಲಿ ನೀರು ಸಿಕ್ಕರೆ ಸತ್ರಗಳಲ್ಲಿ ಆಹಾರವು ಮತ್ತು ವಿಶ್ರಾಂತಿ ತೆಗೆದುಕೊಳ್ಳಲು ವಸತಿಯು ದೊರೆಯುತ್ತಿತ್ತು. ಇದು ಒಂದು ರೀತಿಯಲ್ಲಿ ಅತಿಥಿ ಸತ್ಕಾರದ ವಿಸ್ತೃತ ರೂಪವೆನ್ನಬಹುದು. ಸತ್ರಗಳು ಬಹುಮಟ್ಟಿಗೆ ದೇವಾಲಯಗಳ ಅಥವಾ ಮಠಗಳಿಗೆ ಹೊಂದಿ ಕೊಂಡಿರುತ್ತಿದ್ದವು.ಪ್ರಾಚೀನ ಕರ್ನಾಟಕದ ಜನ ಭೂಧಾನ ವಿದ್ಯಾದಾನಗಳಿಗಿಂತ ಅನ್ನದಾನವೇ ಶ್ರೇಷ್ಠವೆಂದು ನಂಬಿದ್ದರಿಂದ ಅನೇಕ ಸತ್ರಗಳಿಗೆ ದಾನದತ್ತಿಗಳನ್ನು ಬಿಟ್ಟುಕೊಡಲಾಗುತ್ತಿತ್ತು. ಕಲ್ಲಿಸೆಟ್ಟಿಯು ಚಕ್ರವರ್ತಿ ಬಿಜ್ಜಳನ ಮಹಾಮಂಡಳೇಶ್ವರ ಪಾವಿನಪೆರ್ಮ್ಮಾಡಿ ಇವರ ಸನ್ನಿಧಾನದಲ್ಲಿ ಐದು ಜನ ಪ್ರವಾಸಿ ಬ್ರಾಹ್ಮಣರ ಅನ್ನಛತ್ರಕ್ಕೆ ಎರಡು ಮತ್ತರು ಭೂಮಿಯನ್ನು ಕ್ರಯಗೊಂಡು ದಾನ ಮಾಡಿದ ಸಂಗತಿಯನ್ನು ಉಮ್ರಾಣಿ ಶಾಸನವು ಹೆಳುತ್ತದೆ. ಅಲ್ಲದೆ ಎದೆ ಶಾಸನದಲ್ಲಿ ಬಿಜ್ಜಳನ ಮಗನಾದ ರಾಯಮುರಾರಿ ಸೋಯಿದೇವನ ಆಳ್ವಿಕೆ ಸೂಚಿಸಿ ಮನ್ನೆಯ ಸಾವಿನ ಪೆರ್ಮ್ಮಾಡಿಯ ಸಮಕ್ಷಮದಲ್ಲಿ ಮೂರು ಮತ್ತರು ಭೂಮಿಯನ್ನು ಕ್ರಯಗೊಂಡು ಸತ್ರಕ್ಕೆ ದಾನ ಬಿಟ್ಟಿದ್ದನ್ನು ಹೇಳಿದೆ. ಅಷ್ಟೇ ಅಲ್ಲ ಇದೆ ಸತ್ರಕ್ಕೆ ಒಂಭತ್ತು ಕಯ್ಯ ಚದುರಸ ನಿವೇಶನವನ್ನು ಕ್ರಯಕ್ಕೆ ತೆಗೆದುಕೊಂಡು ಒಂದು ಭೋಜನ ಶಾಲೆಯನ್ನು ಕಟ್ಟಿಸಿಕೊಟ್ಟನೆಂದು ಹಾಗೂ ಸತ್ರಕ್ಕೆ ಮತ್ತೆ ಎರಡು ಮತ್ತರು ಭೂಮಿಯನ್ನು ಕೊಂಡುಕೊಟ್ಟನೆಂದು ಹೇಳಲಾಗಿದೆ. ತೆಲಸಂಗದ

ಶಾಸನವು ಅಗ್ರಹಾರದ ಮಹಾಜನಂಗಳು ಮೂವತ್ತಾರು ಬೀಡಿನ ಸೆಟ್ಟಿಯರು, ತಳದ
ಬನಜಿಗ ಸೆಟಟಿಯರು, ಅಲ್ಲಿನ ಸತ್ರಕ್ಕೆ ಸಂತೆಯ ಸುಂಕವನ್ನು ಬಿಟ್ಟಿದ್ದನ್ನು ಮತ್ತು ಸತ್ರದಲ್ಲಿ
ಅಡಿಗೆ ಕೆಲಸ ಮಾಡುವ ಬ್ರಾಹ್ಮಣತಿಯ ಉಡುವ ಸೀರೆ ಹಾಗವೊಂದನ್ನು ಬಿಟ್ಟುದಾಗಿ
ಹೇಳಿದೆ.ಸಾರ್ವಜನಿಕರು ತಮ್ಮ ದಿನನಿತ್ಯದ ವ್ಯವಹಾರಗಳಿಗಾಗಿ ಅಂಗಡಿ ಮೂಗ್ಗಟ್ಟುಗಳನ್ನು,
ಸಂತೆಯನ್ನು ನೆರೆಯಿಸುವುದು ಶಾಸನಗಳಲ್ಲಿ ಕಂಡು ಬರುತ್ತದೆ. ಕಣಂಬಡೆ ನಾಡಿನ
ತೆಲಸಂಗಿ ಶಾಸನದಲ್ಲಿ ವಿವಿಧ ವ್ಯಾಪಾರಿಗಳ ಅಂಗಡಿಗಳನ್ನು ಹೆಸರಿಸಿ ಪ್ರತಿಯೊಬ್ಬ
ವ್ಯಾಪಾರಿತಿಂದ ಸುಂಕ ಪಡೆಯುತ್ತಿದ್ದ ಸಂಗತಿ ಹೇಳಿರುವುದುರಿಂದ ಇವು ಒಂದೆ ಕಡೆ ಇದ್ದು
ಅಲ್ಲಿ ಸಂತೆ ನೆರೆಯುತ್ತಿತ್ತು ಎಂಬ ಅಂಶ ಗಮನಕ್ಕೆ ಬರುತ್ತದೆ.

**ವಿದ್ಯಾಭ್ಯಾಸ:**

ವಿದ್ಯೆಯ ವಿಷಯದಲ್ಲಿ ಪ್ರಾಚೀನ ಭಾರತವು ಇಟ್ಟುಕೊಂಡಿದ್ದ ಅಭಿಪ್ರಾಯಗಳನ್ನು
ಹೀಗೆ ಸಂಗ್ರಹಿಸಬಹುದು. ವಿದ್ಯೆಗಿಂತ ಶ್ರೇಷ್ಠವಾದುದು ಮತ್ತೊಂದು ಇಲ್ಲ. ಸರ್ವದ್ರವ್ಯಗಳಲ್ಲಿ
ವಿದ್ಯೆಯೆ ನಿಜವಾದ ಧನ. ಏಕೆಂದರೆ ಅದನ್ನು ಯಾರೂ ಅಪಹರಿಸಲಾರರು. ಅದು
ಅನರ್ಘ್ಯವಾದುದು ಮತ್ತು ಅಕ್ಷಯವಾದುದು. ಜ್ಞಾನಾರ್ಜನೆಯು ಒಂದು ನಾಡಿನ
ಸಂಸ್ಕೃತಿಯ ಕುರುಹಾಗಿದ್ದು ಎಲ್ಲ ಕಾಲ, ದೇಶಗಳಲ್ಲಿ ಅದಕ್ಕೆ ಗೌರವ ವ್ಯಕ್ತವಾಗುತ್ತ ಬಂದಿದೆ.
ಬಹು ಹಿಂದಿನಿಂದಲೂ ಭಾರತೀಯರು ವಿದ್ಯೆಯ ಬಗ್ಗೆ ಅಪಾರ ಗವರವವನ್ನಿಟ್ಟುಕೊಂಡು
ಬಂದಿದ್ದರೆ. ಪ್ರಾಚೀನ ಭಾರತೀಯರ ಬದುಕನ್ನು ನಿಯಂತ್ರಿಸುವ ಧರ್ಮ ವಿದ್ಯಾಭ್ಯಾಸ
ಪದ್ಧತಿಯನ್ನು ಬಿಟ್ಟಿಲ್ಲ. ವಿದ್ಯೆಯ ಪರಮಪ್ರಯೋಜನ ಆತ್ಮಸಿದ್ಧಿ, ಆತ್ಮಜ್ಞಾನ ಎನ್ನುವಲ್ಲಿ ಅದರ
ನೇರ ಸೂಚನೆಯಿದೆ. ಜನರು ದೇವಾಲಯಗಳಿಗೆ ದಾನ – ದತ್ತಿಗಳನ್ನು ಬಿಟ್ಟುಕೊಡುವಾಗ
ವಿದ್ಯಾಭ್ಯಾಸಕ್ಕಾಗಿ ಇಂತಿಷ್ಟು ಎಂದು ನಿಗದಿಪಡಿಸುತ್ತಿದ್ದರು. ಹೀಗೆ ದೇವಸ್ಥಾನಗಳು
ವಿದ್ಯಾಭ್ಯಾಸ ಕೇಂದ್ರಗಳೆನಿಸಿದವು. ವಿದ್ಯಾ ಕೇಂದ್ರಗಳಾದ ದೇವಸ್ಥಾನಗಳಲ್ಲಿ ತಪೋಧನರು.
ಛಾತ್ರರು ವಿದ್ಯಾಬ್ಯಾಸದಲ್ಲಿ ನಿರತರಾಗಿರುತ್ತಿದ್ದರು. ತಪೊಧನರು ನೈಷ್ಟಿಕ ಬ್ರಹ್ಮಚಾರಿಗಳಾಗಿದ್ದು
ವಿದ್ಯಾಭ್ಯಾಸದ ನಂತರ ಮಠ, ದೇವಸ್ಥಾನಗಳಲ್ಲಿ ಸ್ಥಾನಪತಿಗಳಾಗುತ್ತಿದ್ದರು. ಛಾತ್ರರು
ವಿದ್ಯಾಭ್ಯಾಸ ಮುಗಿದ ಮೇಲೆ ಗೃಹಸ್ಥಾಶ್ರಮಕ್ಕೆ ಪಾದಾರ್ಪಣ ಮಾಡುತ್ತಿದ್ದರೆ, ತಪೋಧರರು
"ಯಮನಿಯಮಾಸನ, ಪ್ರಾಣಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಜಪ ಸಮಾಧಿ
ಸಂಪನ್ನರಾಗಲು" ಸಾಧನೆ ನಡೆಸುವುದರೊಂದಿಗೆ ದಿನಾಲು ಹಿರಿಯ ಪಂಡಿತರಾದ
ಸ್ಥಾನಾಪತಿಗಳೊಂದ ಉಪದೇಶ ಪಡೆಯುತ್ತಿದ್ದರೆಂದು ತೋರುತ್ತದೆ. "ಕೊಕಟನೂರು
ಶಾಸನದಲ್ಲಿ ಚಾಳುಕ್ಯ ಚಕ್ರವರ್ತಿ ತ್ರೈಳೋಕ್ಯಮಲ್ಲದೇವನ ಮಹಾಮಂಡಳೇಶ್ವರ
ಜೋಗಭೂಪಾಲಕನು ಕರಹಡನಾಲ್ಸಾಸಿರ ಪ್ರದೇಶವನ್ನು ಆಳುತ್ತಿದ್ದಾಗ ಕೊಕಟನೂರಿನಲ್ಲಿ
ಕೂಚಸೆಟ್ಟಿ ಕಟ್ಟಿಸಿದ ತ್ರೈಪುರುಷ ದೇವರಿಗೆ ದತ್ತಿಯನ್ನು ಬಿಡುವಾಗ ಅಲ್ಲಿಯ ಶಾಲೆಯ
ವಿದ್ಯಾರ್ಥಿಗಳಿಗೆ ಓದಿಸುವ ಉಪಾಧ್ಯಾಯರಿಗೆ ಅಲ್ಲಿಯ ಮಾಣೆಯಗ್ಗ್ರಶನಾಚ್ಛಾದನಕ್ಕೆ

ತುಂಗಳ ೧೨ರ ಬಳಿಯ ಜನ್ನವಾಡನನ್ನು ದತ್ತಿಯಾಗಿ ಬಿಟ್ಟಿರುವುದನ್ನು ತಿಳಿಸುತ್ತದೆ" ಮತ್ತು ಇದೇ ಶಾಸನದಲ್ಲಿ ವಿದ್ಯೆಯನ್ನು ಕಲಿಸುತ್ತಿದ್ದ ಶಾಲೆಯನ್ನು

"ಶಾಲೆಯ ಪರಿಸೂತ್ರದೊಳಾ
ತ್ಮಾಲಯಮಂ ಮಾಡಿಕೊಳ್ವುದಲ್ಲದೆ ಪೆರತೊ ।
ನ್ದಾಲಯದೊಳಿರ್ಪ್ಪವಂ ಪ್ರತಿ
ಕೂಲಂ ಲೋಲ ನಿಮಿಷ್ಟನಲ್ಲಂ ದುಷ್ಟಂ ॥"

ಎಂದು ವರ್ಣಿಸಿ ಅಲ್ಲಿಯ ಎಂಟು ಜನ ನಿಮಿಷ್ಟರಿಗೆ ಉಂಬಳಿಯಾಗಿ ತೊಂಭತ್ತಾರು ಮತ್ತರು ಭೂಮಿಯನ್ನು ದಾನವಾಗಿ ನೀಡಿದ್ದನ್ನು ಉಲ್ಲೇಖಿಸುತ್ತದೆ. ದೇವಾಲಯಗಳು ವಿದ್ಯಾಕೇಂದ್ರಗಳಾಗಿದ್ದವು ಎನ್ನುವದಕ್ಕೆ ಕೊಕಟನೂರ ಶಾಸನದಲ್ಲಿ ಕೂಚಸೆಟ್ಟಿ ತ್ರೈಪುರುಷ ದೇವಾಲವನ್ನು ಮಾಡಿಸುವುದರೊಂದಿಗೆ ತ್ರೈಪುರುಷ ಶಾಲೆಯನ್ನು ಮಾಡಿಸಿದನೆಂದು ಹೇಳಿರುವುದು ಇದನ್ನು ಸ್ಪಷ್ಟ ನಿದರ್ಶನವಾಗಿದೆ.

ದೇವಸ್ಥಾನ, ಮಠಗಳ ಸಂಪೂರ್ಣ ಹೊಣೆ ಹೊತ್ತ ಸ್ಥಾನಾಚಾರ್ಯರು ನೈಷ್ಠಿಕ ಬ್ರಹ್ಮಚಾರಿಗಳಾಗಿರುವುದರೊಂದಿಗೆ ವಿದ್ಯಾ ಪಕ್ಷಪಾತಿಗಳೂ ಆಗಿದ್ದರು. ಕಣಂಬಡೆನಾಡಿನ ಉಸ್ರಾಣಿ ಶಾಸನವು ಸ್ಥಾನಾಚಾರ್ಯರ ಗುರು ಪರಂಪರೆಯನ್ನು ಹೆಸರಿದೆ. "ಚತುರಾಸ್ಯಂಗಂ ವಚನೋವಲ್ಲಭೆಗವಧಿಕ ನೀವಾಂದೇವಬ್ರತೀಂದ್ರ ಪ್ರತಿವಾಭೌಘುಸಿಂಹ ಸಕಳ ಕಳೆಯೊಳೆಂದೆಂಬಿನಂ ಖ್ಯಾತಿವೆತ್ತಂ ಜಿತಬಾಹಾ ಮುಖ್ಯರೂಪಂ ತಪಸ್ಸುತ್ಯರೂಪಂ – ಕಂದರ್ಪೋಗ್ರಚಾಪಂ ಸ್ಖಳಿತ ವಿಷಯಲೇಪಂ ವೇವಿತ ವಾದಿದೇವ ಮುನಿಗಳಾವಾಸಿಯಾಗಿರ್ದ್ದ ಭೂಮಿನುತಂ ವಾಗ್ವಿನುತಂ – ತತುಶಿಷ್ಯನಾದ ಮಹಾಮನು ಲೋಕಾಭರಣಂ ವ್ರತೀಶ ವಿದ್ವತ್ಸಭಾಸೇಖರಂ ಲೋಕಾಭರಣಂವೃತೀಂದ್ರ ತಿಳಿಕ ವಿಖ್ಯಾತಿವೆತ್ತೊಪ್ಪಿದಂ ॥ ವಾಗುದೇವಿ ಚಾತುರಿ ಯಮಂ ಮೂಗವಟ್ಟರು ಮಿಮಾಂಸಕ ವಾಕು ಪ್ರಗಲ್ಭ್ಯಮಂ ಜೈನ ಬಂಧುರ ಚಂದ್ರಾಭರಣ ವ್ರತೀಶಃ॥ ಎಂದು ಗುರುಪರಂಪರೆ ಮತ್ತು ಅಪರ ವಿದ್ವತ್ತನ್ನು ಹೇಳಿದೆ.

**ವಿದ್ಯಾ ಕೇಂದ್ರಗಳು:**

ಪ್ರಾಚೀನ ಕರ್ನಾಟಕದಲ್ಲಿ ದೇವಸ್ಥಾನಗಳು ಮತ್ತು ಮಠಗಳು ವಿದ್ಯೆ ಕೊಡುವ ಕೇಂದ್ರಗಳಾಗಿದ್ದವು. ದೇವಸ್ಥಾನಕ್ಕೆ ಹೊಂದಿಕೊಂಡ ಮಠಗಳು ನೈಷ್ಠಿಕ ಬ್ರಹ್ಮಚಾರಿಗಳಾದ ಸ್ಥಾನಪತಿ ಹಾಗೂ ತಪೋಧರ ವಾಸಸ್ಥಾನವಾಗಿದ್ದವು.

ವಿದ್ಯಾದಾನವು ಮುಖ್ಯವಾಗಿ ನಾಲ್ಕು ಕೇಂದ್ರಗಳಲ್ಲಿ ನಡೆಯುತ್ತಿದ್ದು, ಅವುಗಳನ್ನು ೧) ಅಗ್ರಹಾರ, ೨) ದೇವಸ್ಥಾನ ಅಥವಾ ಮಠ, ೩) ಬ್ರಹ್ಮಪುರಿ ಮತ್ತು ೪) ಘಟಿಕಾಸ್ಥಾನ ಎಂದು ವಿಂಗಡಿಸಲಾಗಿದೆ. ಅಗ್ರಹಾರ, ಬ್ರಹ್ಮಪುರಿಗಳು ವಿದ್ಯಾವಂತ ಮಹಾಜನರ ವಾಸಸ್ಥಾನಗಳಾಗಿದ್ದರೆ ಘಟಿಕಾಸ್ಥಾನಗಳು ಉನ್ನತ ವಿದ್ಯಾಭ್ಯಾಸ ಕೇಂದ್ರಗಳಾಗಿದ್ದವು.

ಮಹ್‌ಗ್ರಹಾರ ಕೊಕಟೂರಿನಲ್ಲಿ ತ್ರೈಪುರುಷ ದೇವಾಲಯ ಮತ್ತು ಅದಕ್ಕೆ ಹೊಂದಿಕೊಂಡು ಶಾಲೆ ಇರುವ ಸಂಗತಿ ಅಲ್ಲಿನ ಶಾಸನದಲ್ಲಿದೆ. ಅದನ್ನು ಮಹಾಮಂಡೇಶ್ವರ ಜೋಗಪಯ್ಯ ಕರಿಪಡ ನಾಲ್ಸಾಸಿರ ಪ್ರದೇಶವನ್ನು ಆಳುತ್ತಿದ್ದಾಗ, ಕೂಚಿಶೆಟ್ಟಿ ನಿರ್ಮಿಸಿದ್ದು, ಅಲ್ಲಿಯ ವಿದ್ಯಾರ್ಥಿಗಳನ್ನು ಓದಿಸುವ ಉಪಾಧ್ಯಾಯರಿಗೆ ದಾನ ನೀಡಿದ್ದನ್ನು ಅದು ತಿಳಿಸುತ್ತದೆ. ಅಗ್ರಹಾರ ತೆಲಸಂಗ ದಲ್ಲಿ ಐದು ನೂರು ಜನ ವಿದ್ಯಾವಂತ ಸೂರು ಬ್ರಾಹ್ಮಣರಿದ್ದ ಸಂಗತಿಯನ್ನು ಅಲ್ಲಿನ ಶಾಸನ ಉಲ್ಲೇಖಿಸಿದೆ. ಕಣಂಬಡೆ ನಾಡಿನ ಶ್ರೀಮದಗ್ರಹಾರ ಕೊಗ್ಗೊಟನೂರಿನ ಶ್ರೀಸ್ವಯಂಭು ವಿಶ್ವೇಶ್ವರ ದೇವರ ಸ್ಥಾನಾಚಾರ್ಯ ವಿದ್ಯಾರಾಶಿ ಪಂಡಿತ ದೇವರಿಗೆ ಮತ್ತು ಮಠದ ತಪೊಧನರಿಗೆ ವಿದ್ಯಾರ್ಥಿಗಳಿಗೆ ತುಂಗಳ ಬಳಿಯ ನಾಗರಾಳವನ್ನು ದತ್ತಿಬಿಟ್ಟಿದ್ದನ್ನು ಹೇಳಿದೆ. ಇಲ್ಲಿನ ವಿದ್ಯಾರಾಶಿ ಪಂಡಿತರು ಮಠದ ತಪೋಧನರಿಗೆ, ವಿದ್ಯಾರ್ಥಿಗಳಿಗೆ ಶಿಕ್ಷಣ ನೀಡುತ್ತಿರಬೇಕು. ಇದರಿಂದ ದೇವಾಲಯ ಮತ್ತು ಅದಕ್ಕೆ ಹೊಂದಿಕೊಂಡ ಮಠಗಳಲ್ಲಿ ವಿದ್ಯಾಭ್ಯಾಸ ನಡೆಯುತ್ತಿತ್ತೆಂಬುದು ಸ್ಪಷ್ಟವಾಗುತ್ತದೆ.

**ಬ್ರಹ್ಮಪುರಿ:**

ನಗರಗಳಲ್ಲಿ ಅಥವಾ ಪಟ್ಟಣಗಳಲ್ಲಿ ಬ್ರಾಹ್ಮಣ ವಿದ್ವಾಂಸರು ವಾಸಿಸುವ ಭಾಗವೇ ಬ್ರಹ್ಮಪುರಿ, ಅಗ್ರಹಾರಗಳು ಊರುಗಳಾದರೆ ಬ್ರಹ್ಮಪುರಿಗಳು ಪಟ್ಟಣಗಳ ಭಾಗಗಳು. ಅಗ್ರಹಾರಗಳಿಗಿಂತ ಬ್ರಹ್ಮಪುರಿಗಳ ಸಂಖ್ಯೆ ಕಡಿಮೆ. ಏಕೆಂದರೆ ಪ್ರಾಚೀನ ಕರ್ನಾಟಕದಲ್ಲಿ ಹಳ್ಳಿಗಳ ಸಂಖ್ಯೆ ಹೆಚ್ಚು, ನಗರಗಳ ಸಂಖ್ಯೆ ಕಡಿಮೆ. ಅಗ್ರಹಾರಗಳಲ್ಲಿದ್ದ ಬ್ರಾಹ್ಮಣರು ಆ ಊರುಗಳ ಒಡೆಯರು. ಆದರೆ ಬ್ರಹ್ಮಪುರಿಗಳಲ್ಲಿದ್ದ ಬ್ರಾಹ್ಮಣರು. ಆ ಊರಿನ ಇತರ ಪಂಗಡಗಳ ಜನರಿದ್ದಂತೆಅಗ್ರಹಾರದ ಬ್ರಾಹ್ಮಣರಿಗಿದ್ದ ಅಧಿಕಾರ ಇವರಿಗಿರಲಿಲ್ಲ.

ಕಣಂಬಡೆ ನಾಡಿನ ಉಮ್ರಾಣಿ ಶಾಸನವು ಬ್ರಹ್ಮಪುರಿಯನ್ನು ಉಲ್ಲೇಖಿಸಿದೆ. ಅದು ಚಕ್ರವರ್ತಿ ಬಿಜ್ಜಳದೇವನ ಮಹಾಮಂಡಳೇಶ್ವರ ಪಾವಿನ ಪೆರ್ಮ್ಮಾಡಿಯರಸರು ಸಹಿತವಾಗಿ ಕಲ್ಲಿಸೆಟ್ಟಿಯು ಉಂಬರವಾಣಿಯ ನಾನಾದೇಶಿ ಪ್ರವಾಸಿಗ ಬ್ರಾಹ್ಮಣರಯ್ವರ ಸತ್ರದಾಹಾರದಾನಕ್ಕೆ ಭೂಮಿದಾನ ಬಿಟ್ಟದ್ದನ್ನು ತಿಳಿಸುತ್ತದೆ. ಹಾಗೇ ಬಾಡಗಿ ಶಾಸನವು ಮೈಲುಗಿ ದೇವನ ಅನುಮತಿಯಿಂದ ಬಾಡಗಿಯ ಚೌಡಭಟ್ಟೋಪಾಧ್ಯಾಯ ಮತ್ತು ಅವನ ಮಗ ಚಕ್ರಿಭಟ್ಟೋಪಾಧ್ಯಾರು ಬಾಡಿಗೆಯ ಲಕ್ಷ್ಮಣೇಶ್ವರ ದೇವರಿಗೆ ಭೂಮಿದತ್ತಿ ನೀಡಿದ್ದನ್ನು ಉಲ್ಲೇಖಿಸುತ್ತ, ಬಾಡಿಗೆಯ ಬ್ರಹ್ಮಪುರಿಯ ನಾನಾ ಗೋತ್ರದ ಬ್ರಾಹ್ಮಣರಿಗೆ ಭೂಮಿ ದಾನ ನೀಡಿದ್ದನ್ನು ಪ್ರಸ್ತಾಪಿಸುತ್ತದೆ.

**ಘಟಿಕಾಸ್ಥಾನ:**

ವೈದಿಕ ಬ್ರಾಹ್ಮಣರಿಗೆ ವಿದ್ಯಾಕೇಂದ್ರಗಳಾಗಿದ್ದ, ದೇವಸ್ಥಾನಗಳಿಗೆ ಮತ್ತು ಜ್ಯೋತಿಷ್ಯರಿಗೆ ಅಗತ್ಯವಾಗಿರಬೇಕಾಗಿರುವ ಘಳಿಗೆ ಬಟ್ಟಲುಗಳ ಘಟಿಕಾಯಂತ್ರ ಸ್ಥಾಪನೆಯಿಂದ ಘಟಿಕಾ ಸ್ಥಾನವೆಂಬ ಹೆಸರು ಬಂದಿರ ಬಹುದು ಎನ್ನುತ್ತಾರೆ ಚಿದಾನಂದಮೂರ್ತಿಯವರು. ಈ

ಊಹೆಯನ್ನು ಸದ್ಯಕ್ಕೆ ಸ್ವೀಕರಿಸಬಹುದು ಎಂಬ ಡಾ. ಎಸ್. ಕೆ. ಕೊಪ್ಪಾ ಅವರ ಹೇಳಿಕೆ ಸಮಂಜಸವಾಗಿದೆ. ಕಣಂಬಡೆ ನಾಡಿನ ಶಾಸನಗಳಲ್ಲಿ ಘಟಿಕಾಸ್ಥಾನದ ಕುರಿತು ಯಾವುದೇ ಉಲ್ಲೇಖ ಬರದಿದ್ದರು. ಕನ್ನಡ ಶಾಸನಗಳಲ್ಲಿ ವಿದ್ವಾಂಸರ ಹೆಸರುಗಳ ಹಿಂದೆ ಕಾಣಿಸಿಕೊಳ್ಳುವ ಘಟಿಕಾ ಸಾಹಸ, ಘಳಿಸಾಸ, ಘೈಸ ಎಂಬ ವಿಶೇಷಣವನ್ನು ಗಮನಿಸಿದ ಡಾ. ಎಂ. ಚಿದಾನಂದಮೂರ್ತಿಯವರು ಘಟಿಕಾ ಸ್ಥಾನಗಳಲ್ಲಿ, ವಿದ್ವಾಂಸರ ಚರ್ಚೆಗಳು, ವಾದ ವಿವಾದಗಳು ನಡೆಯುತ್ತಿದ್ದವು. ಅಲ್ಲಿ ಜ್ಞಾನದ ಸಹಸವನ್ನು ಪ್ರದರ್ಶಿಸಿ ಮನ್ನಣೆ ಪಡೆದವನೆಂದು ಜನ ಈ ವಿಶೇಷಣದಿಂದ ಭಾವಿಸುತ್ತಿದ್ದಿರಬೇಕೆಂದಿದ್ದಾರೆ. ಕಣಂಬಡೆ ನಾಡಿನ ಉಮ್ರಾಣಿ ಶಾಸನದಲ್ಲಿ ಚಿದ್ದಿಯಂಣ ಘೈಸಾಸ, ಮತ್ತು ಮಾಳಿಯಣ ಘೈಸಾಸರ ಉಲ್ಲೇಖ ಬಂದಿದೆ. ಬಾಡಗಿ ಶಾಸನವು ಜಾತವೇದ ಘಳಸಾಸರನ್ನು ಹೆಸರಿಸಿದೆ. ಉಮ್ರಾಣಿಶಾಸನ 'ಮಾಳಿಯಣ್ಣ ಘೈಸಾಸರ ವೃತ್ತಿಯ ಪಿರಿಯ ಕೋಲ ಮತ್ತರೆರಡು' ಎಂದು ಹೇಳುವುದರಿಂದ ವಿದ್ಯಾವಂತರಾದ ಇವರಿಗೆ ಸಮಾಜದಲ್ಲಿ ಗೌರವಯುತ ಸ್ಥಾನ ದೊರಕಲು ಸಾಕು. ಹೀಗಾಗಿ ಅವರ ಹೆಸರಿನ ಅಳತೆಕೋಲು ಇದಾಗಿರಬೇಕೆಂದು ಸ್ಪಷ್ಟವಾಗುತ್ತದೆ.

**ಪ್ರಾಥಮಿಕ ಶಿಕ್ಷಣ:**

ಪ್ರಾಥಮಿಕ ಶಿಕ್ಷಣದ ಕುರಿತು ಶಾಸನಗಳು ಹೆಚ್ಚಿನ ವಿವರಗಳನ್ನು ಒದಗಿಸುವದಿಲ್ಲ. ಬಾಲಕರಿಗೆ ಪಾಠವನ್ನು ಹೇಗೆ ಆರಂಭಿಸುತ್ತಿದ್ದರು, ಯಾವ ಪುಸ್ತಕದಿಂದ ಆರಂಭಿಸುತ್ತಿದ್ದರು ಎಂಬುದರ ಪರಿಚಯ ಶಾಸನಗಳಿಂದಾಗಲಿ, ಕಾವ್ಯಗಳಿಂದಾಗಲಿ ನಮಗಾಗುವದಿಲ್ಲ. ದತ್ತಿಗಳನ್ನು ಕೊಟ್ಟಿರುವುದು ಪ್ರೌಢ ವಿದ್ಯಾಭ್ಯಾಸಕ್ಕೆ ಆದರೂ ಒಂದೆರಡು ಶಾಸನಗಳಲ್ಲಿ ದೊರಕುವ ಪ್ರಾಥಮಿಕ ವಿದ್ಯಾಭ್ಯಾಸಕ್ಕೆ ಸಂಬಂಧಪಟ್ಟ ವಿವರಗಳಿಂದ ನಾವು ತೃಪ್ತಿ ಪಟ್ಟುಕೊಳ್ಳಬೇಕಾಗಿದೆ. ತಾಳಗುಂದದ ಶಾಸನವೊಂದರಲ್ಲಿ ವೇದಾಧ್ಯಯನ ಮುಂತಾದವುಗಳಿಗೆ ಕೊಟ್ಟ ದತ್ತಿಗಳ ಜೊತೆಯಲ್ಲಿ "ಕನ್ನಡಕ್ಷರ" ಶಿಕ್ಷಕನಿಗೂ ದತ್ತಿಯನ್ನು ಬಿಟ್ಟುಕೊಟ್ಟಂತೆ ಹೇಳಿದೆ. ಬಹುಶಃ ಆ ಕಾಲದಲ್ಲಿ ಬಾಲಕರಿಗೆ ಮೊದಲು ಕನ್ನಡ ಅಕ್ಷರವನ್ನು ಕಲಿಸುತ್ತಿದ್ದಂತೆ ಕಾಣುತ್ತದೆ. ಕಣಂಬಡೆ ನಾಡಿನಲ್ಲಿ ಪ್ರಾಥಮಿಕ ಶಿಕ್ಷಣದ ಕುರಿತು ವಿವರಣೆ ಸಿಗುವುದಿಲ್ಲ. ಆದರೆ ವೇದಗಳಲ್ಲಿ ಪರಿಣಿತಿ ಹೊಂದಿದ ವಿದ್ವಾಂಸರನ್ನು ಶಾನನಗಳಲ್ಲಿ ಉಲ್ಲೇಖಿಸಲಾಗಿದೆ.

**ಪ್ರೌಢ ಶಿಕ್ಷಣ:**

ಪ್ರೌಢ ವಿದ್ಯಾಭ್ಯಾಸ ಮಾಡುವ ವಿದ್ಯಾರ್ಥಿಗಳೇ ಛಾತ್ರರು. ಛಾತ್ರರಿಗೆ ವಿದ್ಯಾಭ್ಯಾಸ ಮಾಡಿಸುವ ಉಪಾಧ್ಯಾಯರಿಗೆ ಭಟ್ಟ ವೃತ್ತಿಯನ್ನು ಬಿಟ್ಟುಕೊಡುತ್ತಿದ್ದರು. ಕಣಂಬಡೆ ನಾಡಿನ ಬಾಡಗಿ[೭೮] ಶಾಸನದಲ್ಲಿ ಚೂಡಾಮಣಿ ನಾಗದೇವ ಭಟ್ಟೋಪಾಧ್ಯಾಯರ ಮಗಂ ಗೋವಿಂದಭಟ್ಟರು ಮತ್ತು ವಿಶ್ವಾಮಿತ್ರ ಗೋತ್ರ ಪವಿತ್ರ ಚೂಡಾಮಣಿ ಮಂಕಣ ಭಟ್ಟೋಪಾಧ್ಯಾಯರನ್ನು ಹೆಸರಿಸಿದೆ. ಕೂಕಟನೂರ ಶಾಸನವು ಕೊಚಿಶೆಟ್ಟಿ ತಾನು ಮಾಡಿಸಿದ ತ್ರೈಪುರುಷ ದೇವರಿಗೆ ದತ್ತಿ ಬಿಡುವಾಗ ಶಾಲೆಯಲ್ಲೋದುವ ವಿದ್ಯಾರ್ಥಿಗಳಿಗೆ ಮತ್ತು

ಈದಿಸುವ ಉಪಾಧ್ಯಾಯರಿಗೆ ಮತ್ತು ಮಾಣಿಯರ ವಸತಿ ಹಾಗೂ ಆಹಾರಕ್ಕೆ ಜನ್ನವಾಡ ಗ್ರಾಮದತ್ತಿಯಾಗಿ ಬಿಟ್ಟದ್ದನ್ನು ಹೇಳಿದೆ. ಮತ್ತೊಂದು ಶಾಸನದಲ್ಲಿ ಕೊಕಟನೂರಿನ ಸ್ವಯಂಭು ವಿಶ್ವೇಶ್ವರ ದೇವರು ಆಚಾರ್ಯ ವಿದ್ಯಾರಾಶಿ ಪಂಡಿತರಿಗೆ ದೇವರ ಅಂಗಭೋಗ ಮತ್ತು ಖಂಡಸ್ಫುಟಿತ ಜೀರ್ಣೋದ್ಧಾರಕ್ಕಾಗಿ ಮತ್ತು ಮಠದತಪೋಧನರು ಹಾಗೂ ವಿದ್ಯಾರ್ಥಿಗಳಿಗಾಗಿ ಕಣಂಬಡೆ ನಾಡಿನ ತುಂಗಳ ಹನ್ನೆರಡರ ನಾಗರಾಳ ಗ್ರಾಮವನ್ನು ದತ್ತಿಯಾಗಿ ನೀಡಿದ್ದನ್ನು ಉಲ್ಲೇಖಿಸಿದೆ.

**ಪಠ್ಯಕ್ರಮ:**

ವೇದಗಳನ್ನು ಭಾಗ ಭಾಗಗಳಾಗಿ ಅಧ್ಯಯನ ಮಾಡುವುದನ್ನು ವೇದ ಖಂಡಿಕವೆಂದೂ ಪಾಠ ಹೇಳುವ ಉಪಾಧ್ಯಾಯನನ್ನು ಖಂಡಿಕೋಪಾಧ್ಯಾಯನೆಂದೂ ವಿದ್ಯಾರ್ಥಿಯನ್ನು ಖಂಡಿಕ ವಿದ್ಯಾರ್ಥಿಯೆಂದೂ ಕರೆದಿರುವುದನ್ನು ವಿದ್ವಾಂಸರು ಗಮನಿಸಿದ್ದಾರೆ. ಸ್ಥಾನಾಚಾರ್ಯರು ಮತ್ತು ಮಹಾಜನಿಗೆ ದತ್ತಿಯನ್ನು ಕೊಡುವಾಗ ಅವರ ಪಾಂಡಿತ್ಯ ವಿದ್ವತ್ತುಗಳನ್ನು ವರ್ಣಿಸಲಾಗಿದೆ.ಅವರ ಹೆಸರಿನ ಹಿಂದೆ ಇರುವ ವಿಶೇಷಣಗಳನ್ನು ಅವಲೋಕಿಸಿದಾಗ ಅಂದಿನ ಕಾಲದಲ್ಲಿ ಅವರು ಒಂದೊಂದು ವಿಷಯದಲ್ಲಿ ಪಾಂಡಿತ್ಯವನ್ನು ಪಡದಿದ್ದರು ಎನ್ನುವದು ಸ್ಪಷ್ಟವಾಗುತ್ತದೆ. ಉಮ್ರಾಣಿ ಶಾಸನ ನಾಲ್ಕು ವೇದಗಳಲ್ಲಿ ಪರಿಣತಿಯನ್ನು ಹೊಂದಿದ ಮಹಾಜನರಿದ್ದರೆಂದು ಹೇಳಿದರೆ ಬಾಡಗಿ ಶಾಸನವು ಜಾತವೇದ ಘಳಿಸಾಸರನ್ನು ಹೆಸರಿಸಿದೆ. ಉಮ್ರಾಣಿ ಶಾಸನವು ಸ್ಥಾನಾಚಾರ್ಯ ಚಂದ್ರಾಭರಣರನ್ನು ಮೀಮಾಂಸಕ ವಾಕು ಪ್ರಾಗಲ್ಭ್ಯ ಜೈನ ಬಂಧುರ ಎಂದು ಕರೆದಿದೆ. ದೇವಾಲಯಗಳಲ್ಲಿ ವಿದ್ಯೆಯನ್ನು ಪಡೆಯುವ ಅಗ್ರಹಾರದ ಮಹಾಜನರು ವೇದಾಧ್ಯಯನದಲ್ಲಿ ತೊಡಗಿದರೆ, ಶೈವರಿಗಾಗಿ ಶೈವಾಗಮಗಳೂ ಇರುತ್ತಿದ್ದವು. ಕಣಂಬಡೆ ನಾಡಿನ ಕೊಕಟನೂರು ಶಾಸನವು ಶೈವಾಗಮಗಳನ್ನು ಅನುಸರಿಸಿದ ಭಾಯಿದೇವನನ್ನು ಹೆಸರಿಸಿ, ಅವನ ಶಿಷ್ಯ ಮಲ್ಲಿದೇವನನ್ನು ಶಿವೈಕ್ಯನೆಂದು ಕರೆದಿದೆ.

**ಸ್ತ್ರೀ ಶಿಕ್ಷಣ:**

ಪ್ರಾಚೀನ ಕರ್ನಾಟಕದಲ್ಲಿ ರಾಜಮನೆತನದ ಸ್ತ್ರೀಯರು, ಪ್ರಧಾನಮಂತ್ರಿ, ದಂಡನಾಯಕ ಮುಂತಾದ ದೊಡ್ಡ ಅಧಿಕಾರಿಗಳ ಹೆಣ್ಣು ಮಕ್ಕಳು ತಕ್ಕ ಮಟ್ಟಿಗೆ ವಿದ್ಯಾವಂತರಾಗಿರುತ್ತಿದ್ದರು.ಅವರಿಗೆ ನರ್ತನ ಸಂಗೀತ ಮುಂತಾದ ಕಲೆಗಳಲ್ಲಿ ವಿದ್ಯೆ ನೀಡಲಾಗುತ್ತಿತ್ತು. ಆದರೆ ಯಾವಿದೇ ಶಾಸನದಲ್ಲಿ ಸ್ತ್ರೀ ವಿದ್ಯಾರ್ಥಿನಿಯ ಹೆಸರು ಪಂಡಿತೆಯರ ಹೆಸರು ಕಂಡುಬರುವುದಿಲ್ಲ ಎಂಬ ಅಂಶವನ್ನು ಅನೇಕ ವಿದ್ವಾಂಸರು ಸ್ಪಷ್ಟಪಡಿಸಿದ್ದಾರೆ. ಕಣಂಬಡೆ ನಾಡಿನ ವಳಸಂಗ ಶಾಸನವು ಆರನೇ ವಿಕ್ರಮಾದಿತ್ಯನ ಪಟ್ಟಮಹಿಷಿ ಚಂದಲದೇವಿ 'ಅಭಿನವ ಶಾರದೆಯಾಗಿದ್ದಳು' ಎಂದು ಹೆಳಿದೆ.

ಧಾರ್ಮಿಕ ವ್ಯವಸ್ಥೆ:

ಭಾರತೀಯ ಸಂಸ್ಕೃತಿಯಲ್ಲಿ ಧರ್ಮವೆಂಬುದಕ್ಕೆ ವಿಶಾಲವಾದ ಅರ್ಥವಿದೆ. ಧರ್ಮವೆಂಬುದು ನಮ್ಮ ಜನತೆಯ ಜೀವನವನ್ನು ಸಮಗ್ರವಾಗಿ ತುಂಬಿಕೊಂಡಿರುವ ಸತ್ವ, ಸಾಹಿತ್ಯ, ಸಂಗೀತ, ನೃತ್ಯ ಶಿಲ್ಪ ಮೊದಲಾದ ಕಲೆಗಳಿಗೂ ಧರ್ಮವೇ ಮೂಲ ಪ್ರೇರಣೆ. ಧರ್ಮ ಕಲೆಗಳನ್ನು ಬೆಳೆಸಿತು. ಕಲೆಗಳು ಧರ್ಮವನ್ನು ಬೆಳೆಸಿದವು. ಮಾನವ ತನ್ನ ಜೀವನದ ಎಲ್ಲ ಕ್ಷೇತ್ರಗಳಲ್ಲಿಯೂ ಧರ್ಮವನ್ನು ಅಳವಡಿಸಿಕೊಂಡು ವೇದ, ಉಪನಿಷತ್, ಆಗಮ, ಸ್ಮೃತಿಗಳು, ಇತಿಹಾಸ ಪುರಾಣಗಳನ್ನು ನಿರೂಪಿಸಿದ. ಧರ್ಮವು ಸಂಸ್ಕೃತಿಯ ಅಂಗವಾಗಿ ಬೆಳೆಯಿತಲ್ಲದೆ, ಪರಂಪರೆಯನ್ನು ಬೆಳೆಯಿಸುವುದಕ್ಕೆ ಪ್ರೇರಣೆಯಾಯಿತು.ಕನ್ನಡ ನಾಡಿನ ಇತಿಹಾಸದೊಂದಿಗೆ ಚತುಸ್ಸಮಯಗಳಾದ ಬೌದ್ಧ, ಜೈನ, ವೈಷ್ಣವ ಹಾಗೂ ಶೈವ ಧರ್ಮಗಳು ಕಾಣಿಸಿಕೊಳ್ಳುತ್ತವೆ. ಈ ಚತುಸ್ಸಮಯಗಳಲ್ಲಿ ಯಾವುದು ಮೊದಲು ಯಾವುದು ಅನಂತರ ಎಂದು ಕಚಿತವಾಗಿ ಹೇಳುವುದು ಕಷ್ಟಸಾಧ್ಯವಾದರೂ, ತೀರ ಪ್ರಾಚೀನ ಕಾಲದಲ್ಲಿಯೇ ಕರ್ನಾಟಕ ಶೈವ ಹಾಗು ವೈದಿಕ ಸಂಸ್ಕೃತಿಯ ಗಾಢಪ್ರಭಾವಕ್ಕೆ ಒಳಗಾಗಿತ್ತೆನ್ನಬಹುದು. ಕ್ರಮೇಣ ಜಾತಿಗಳಾಗಿ ಶೋಷಣೆ ಹೆಚ್ಚಿದಂತೆ ಬೌದ್ಧ, ಜೈನ ಧರ್ಮಗಳು ಜನ್ಮತಾಳಿ ತಮ್ಮ ಕ್ರಿಯಾಶೀಲತೆಯನ್ನು ಹೆಚ್ಚಿಸಿಕೊಂಡವು. ಕಾಲಗತಿಸಿದಂತೆ ಸ್ಥಳೀಯ ಮತ ಪ್ರಭೇಧಗಳು ಇವುಗಳೊಂದಿಗೆ ಕುಡಿದವು. ಇವುಗಳೊಂದ ಬೇಸತ್ತ ಜನತೆಗೆ ಹನ್ನೆರಡನೆಯ ಶತಮಾನದ ಶಿವಶರನರು ಹೊಸ ಸಿದ್ಧಾಂತವನ್ನು ಮುಂದಿಟ್ಟರು. ಅದೇ ಅಭಿನವ ಪಾಶುಪತ ಸಿದ್ಧಾಂತ, ಇವುಗಳ ಹಿನ್ನೆಲೆಯಲ್ಲಿ ಕಣಂಬಡೆ ನಾಡಿನ ಧಾರ್ಮಿಕ ಜೀವನವನ್ನು ವಿವೇಚಿಸಲಾಗಿದೆ.

ಬೌದ್ಧ ಧರ್ಮ:

ಚತುಸ್ಸಯಗಳಲ್ಲಿ ಒಂದಾದ ಬೌದ್ಧ ಧರ್ಮವು ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದಲ್ಲಿ ಇದ್ದುದರ ಕುರಿತು ಹಲವಾರು ಸಂಗತಿಗಳು ತಿಳಿದು ಬಂದಿವೆ. ಕಣಂಬಡೆ ನಾಡಿನ ನೆರೆಯ ತರ್ದವಾಡಿನಾಡಿನಲ್ಲಿ ಬೌದ್ಧಧರ್ಮದ ಕುರಿತು ಇಂಡಿ ಶಾಸನದಲ್ಲಿ ಬೌದ್ಧಾಲಯ ಮತ್ತು ಬೌದ್ಧರು ಇದ್ದ ಉಲ್ಲೇಖವಿದೆ. ಆದರೆ ಕಣಂಬಡೆ ನಾಡಿನಲ್ಲಿ ಬೌದ್ಧರ ಕುರಿತು ಯಾವುದೇ ಉಲ್ಲೇಕಗಳು ಕಂಡುಬರುವುದಿಲ್ಲ.

ಜೈನ ಧರ್ಮ:

ಪ್ರಾಚೀನ ಕರ್ನಾಟಕದಲ್ಲಿ ಜೈನಧರ್ಮವು ತನ್ನ ಗಾಢವಾದ ಪ್ರಭಾವವನ್ನು ಬೀರಿತ್ತು. ಇಲ್ಲಿನ ಅರಸರು, ಸಾಮಂತರು, ಜೈನ ಧರ್ಮ್ವನ್ನು ರಕ್ಷಿಸಿದರು. ಇದರಿಂದ ಅದು ಭದ್ರವಾದ ನೆಲೆಯನ್ನು ಕಂಡುಕೊಳ್ಳುವಂತಾಯಿತು.ಆದರೆ ಕಣಂಬಡೆ ನಾಡಿನಲ್ಲಿ ಜೈನ ಧರ್ಮ ಪ್ರಚಾರದಲ್ಲಿದ್ದಂತೆ ಕಂಡುಬರುವುದು. ಈ ನಾಡಿನ ಹೆಚ್ಚಿನ ಶಾಸನಗಳು ಜೈನಧರ್ಮದ ಕುರಿತು ಮೌನತಾಳಿವೆ. ಪ್ರಾಚೀನ ಕಾಲದ ಜೈನ ಬಸದಿಗಳು ವಿರಳವಾಗಿ ಈ ನಾಡಿನಲ್ಲಿ ಕಂಡುಬರುತ್ತವೆ. ವಿರಳವೆಂಬಂತೆ ಅಥಣಿ ತಾಲೂಕಿನ ಬಳ್ಳಿಗೆರಿ ಜೈನ ಶಾಸನ.

ಉಂಬರವಾಣಿ ಶಾಸನ ಜಿನಾಲಯದ ಕುರಿತು ಉಲ್ಲೇಖಿಸುತ್ತದೆ. ಕ್ರಿ. ಶ. ೧೧೬೪ರ ಉಮ್ರಾಣಿ ಶಾಸನವಲ್ಲಿ ಕಲ್ಲಿಸೆಟ್ಟಿಯು ಪ್ರವಾಸಿಗ ಬ್ರಾಹ್ಮಣರಿಗೆ ದತ್ತಿಯನ್ನು ಕೊಡುವಾಗ 'ತೆಂಕಲನಾಮಿಕ ಜಿನಾಲಯಗೆಯ್ಯಂ ಪಡುವಲಿರ್ದ್ದ ಸ್ಥಳದ ಹಿರಿಯ ಕೋಲಮತ್ತರು ಕ್ರಯಿವಂ' ಮಾಡಿ ಸತ್ರದ ಆಹಾರ ದಾನಕ್ಕೆ ದತ್ತಿಬಿಟ್ಟಿದ್ದನ್ನು ಹೇಳಿದೆ. ಮುಂದುವರಿದು, ಇದೆ ಶಾಸನ ರಾಯಮುರಾರಿ "ಸೋವಿದೇವನ ಮನ್ನೆಯರ ಕಯಯಲು, ಬಸದಿಯಿಂ ಪಡುವ ತೆಂಕಣ ಬೀರನ ಬಟ್ಟೆಯಿಂ ಬಡಗ ರಾಜಬೀದಿಯಂ ಮೂಡಣ ಚದುರಸ ವೊಂಬತ್ತು ಕಯ್ಯ ನಿವೇಶಣವನಾ ಕಲ್ಲಿಸೆಟ್ಟಿ ಧಾರೆಯ ಪಡೆದು ನಾನಾ ದೆಸಿ ಪ್ರವಾಸಿ ಬ್ರಾಹ್ಮಣರ ಸತ್ರಕ್ಕೆ ಭೋಜನ ಶಾಲೆಯಂ ಮಾಡಿ ಬಿಟ್ಟನು" ಎಂದು ಹೇಳಿರುವುದರಿಂದ ಉಮ್ರಾಣಿಯಲ್ಲಿ ಜಿನಾಲಯ ಮತ್ತು ಬಸದಿಯ ಕುರಿತು ಉಲ್ಲೇಖ ಬರುತ್ತದೆ. ಆದರೆ ಇಲ್ಲಿ ಜೈನ ಬಸದಿಯ ಯಾವ ಕುರುಹುಗಳು ಇರುವುದಿಲ್ಲ.

**ಬಸದಿ:**

ಕಣಂಬಡೆ ನಾಡಿನ ಮೂವತ್ತಾರುಂಬಾಡದ ರಾಜಧಾನಿ ಉಂಬರವಾಣಿಯಲ್ಲಿ ಸಮಾವಿಷ್ಟವಾಗಿರುವ ಬಳ್ಳಿಗೇರಿಯ ಶಾಸನವು ಕಲಚುರಿ ಚಕ್ರವರ್ತಿ ಬಿಜ್ಜಳನ ಸಹೋದರ "ಮೈಳುಗಿದೇವನು ಕ್ರಿ. ಶ. ೧೧೫೭ರಲ್ಲಿ ಮುಳಗುಂದದಲ್ಲಿ ರಾಜ್ಯಂಗೈಯ್ಯುತ್ತಿದ್ದಾಗ ಆತನ ಪಾದಪದ್ಮೋಪ ಜೀವಿ ಸಚಿವ ಕಾಳಿದಾಸ ಚರ್ಮ ನಾಥನು ಬಳ್ಳಿಗೇರಿಯಲ್ಲಿ ಮಾಡಿಸಿದ ಪಾರ್ಶ್ವತೀರ್ಥ ಜಿನಾಲಯಕ್ಕೆ ನಿತ್ಯಾರ್ಚನೆಗಾಗಿ ಮತ್ತು ಅಲ್ಲಿಯ ಋಷಿಯರ ಆಹಾರದಾನಕ್ಕಾಗಿ ಭೂಮಿ ತೋಟ, ದತ್ತಿಬಿಟ್ಟಿದ್ದನ್ನು ಹೇಳಿದೆ. ಹಾಗೂ ಬಸದಿಯ ಪೂಜಾರಿಗಳಗೆ ಹರೆಕಾರರಿಗೆ, ದತ್ತಿ ನಿಡಿರುವ ಸಂಗತಿ ಉಲ್ಲೇಖಿತವಾಗಿದೆ. ಈ ಪಾರ್ಶ್ವನಾಥ ಬಸದಿಗೆ ಅರಸರಲ್ಲದೆ,ಬಳ್ಳಿಗೇರಿಯ ಪ್ರಭುಗಳು ಎಂಟು ಹಿಟ್ಟು ಶಾಸನಿಗರು, ದಾನ ನೀಡಿದ ವಿಷಯ ಸ್ಪಷ್ಟವಾಗುತ್ತದೆ. ಈ ಹಿನ್ನಲೆಯಲ್ಲಿ ಕಣಂಬಡೆ ನಾಡಿನಲ್ಲಿ ಜೈನ ಬಸದಿ ಕಟ್ಟಿಸಿದ ಸಂಗತಿಯನ್ನು ಹೇಳುವ ಒಂದೆರಡು ಶಾಸನಗಳು ನಮಗೆ ಲಭ್ಯವಾಗುತ್ತವೆ. ಬಹುತೇಕ ಶಾಸನಗಳು ನೀರಾವರಿಯಿಂದಾಗಿ ನೀರಿನಲ್ಲಿ ಮುಳುಗಿಹೋಗಿವೆ.

ಈ ನಾಡಿನ ತೆಲಸಂಗ ಗ್ರಾಮದಲ್ಲಿ ಜೈನ ಬಸದಿಗಳದ್ದ ಕುರಿತು ಶಾಸನಗಳಲ್ಲಿ ಎಲ್ಲಿಯು ಉಲ್ಲೇಖ ಬರುವುದಿಲ್ಲ. ಆದರೆ ಜಿನಮೂರ್ತಿಶಿಲ್ಪವು ಇತ್ತೀಚೆಗೆ ದೊರಕಿದ್ದು ಅದರ ಛಾಯಾಚಿತ್ರವನ್ನು ಅನುಬಂಧದಲ್ಲಿ ಕೊಡಲಾಗಿದೆ. ಇದರಿಂದ ವಾಸ್ತವವಾಗಿ ಜೈನ ಬಸದಿ ಇತ್ತು ಎಂದು ತಿಳಿಯಬಹುದಾಗಿದೆ.[೨೯]

**ಗಣ – ಗಚ್ಛ – ಅನ್ವಯ – ಬಳಿ:**

ಜೈನ ದಿಗಂಬರ ಪಂಥ ಪ್ರಾಚೀನ ಕಾಲದಿಂದ ಕರ್ನಾಟಕದಲ್ಲಿ ಪ್ರಸಿದ್ಧಿ ಪಡೆದಿರುವುದನ್ನು ವಿದ್ವಾಂಸರು ಶಾಸನಗಳಿಂದ ಸ್ಪಷ್ಟಪಡಿಸಿದ್ದಾರೆ. ಕಣಂಬಡೆ ನಾಡಿನಲ್ಲಿಯು ಈ ಪಂಥವಿರುವುದಾಗಿ ಶಾಸನ–ಶಿಲ್ಪಗಳಿಂದ ತಿಳಿದುಬರುತ್ತದೆ. ಜೈನಧರ್ಮದ

ಪ್ರಸಾರಕಾರ್ಯ ವಿವಿಧ ಸಂಘಗಳ ನೇತೃತ್ವದಲ್ಲಿ ನಡೆಯುತ್ತಿತ್ತು. ಜೈನಧರ್ಮದಲ್ಲಿ ದಿಗಂಬರ ಹಾಗೂ ಶ್ವೇತಾಂಬರಗಳೆಂಬ ಎರಡು ಪಂಗಡಗಳಿದ್ದವು. ಕರ್ನಾಟಕದಲ್ಲಿ ದಿಗಂಬರ ಪಂಗಡ ಪ್ರಚಲಿತದಲ್ಲಿತ್ತು. ಈ ದಿಗಂಬರ ಪರಂಪರೆಯಲ್ಲಿ ಅತ್ಯಂತ ಪ್ರಾಚೀನ ಸಂಘವನ್ನು ಮೂಲ ಸಂಘವೆಂದು ಕರೆಯಲಾಗಿದೆ. ಶ್ರವಣಬೆಳಗೊಳದ ಶಾಸನವೊಂದರಲ್ಲಿ ಆಚಾರ್ಯ ಅರ್ಹದ್ವಲಯ, ಈ ಮೂಲ ಸಂಘವನ್ನು ಸೇನ, ನಂದಿ, ದೇವ, ಸಿಂಹ ನಾಲ್ಕು ಎಂದು ಹೇಳಿದರೆ, ಇಂದ್ರ ನಂದಿ ಇವುಗಳನ್ನೇ ನಾಲ್ಕು ಸಂಘಗಳೆಂದು ಹೆಸರಿಸಿರುವುದನ್ನು ಗಮನಿಸಿದ. ಡಾ. ಎಸ್. ಕೆ. ಕೊಪ್ಪಾ ಅವರು ಸಲ ಸಂಘ, ಗಣ ಅನ್ವಯಗಳನ್ನು ಸಮಾನಾರ್ಥಗಳಲ್ಲಿ ಬಳಸಲಾಗಿದೆ ಎಂದಿದ್ದಾರೆ. ಈ ನಾಡಿನ ಬಳ್ಳಿಗೇರಿ ಶಾಸನ ದಲ್ಲಿ "ಮೂಲಸಂಘ ಕೊಂಡಕುಂದಾನ್ವಯದ ಉಲ್ಲೇಖ ಬಂದಿದೆ. ಇದೇ ಶಾಸನದಲ್ಲಿ ಆಚಾರ್ಯರರ ಪರಂಪರೆಯನ್ನೂ ಹೇಳಿದ್ದನ್ನು ಗಮನಿಸಬಹುದಾಗಿದೆ. ಈ ಆಚಾರ್ಯರು ತಪಸ್ಸು ಮತ್ತು ವಿದ್ವತ್ಪ್ರತಿಭೆಯಿಂದ ಪ್ರಖ್ಯಾತಿಯನ್ನು ಹೊಂದಿದ್ದರೆಂದು ಶಾಸನ ಹೇಳಿದೆ.

**ಜೋಗ ವಟ್ಟಿಗೆ:**

ಧರ್ಮವೆನ್ನುವುದು ಆತ್ಮ - ಪರಮಾತ್ಮರ ವಿಷಯದಲ್ಲಿ ಒಂದು ಜನಸಮೂಹ ತಾಳದ ಇತ್ಯಾತ್ಮಕ ಇಲ್ಲವೆ ನೇತ್ಯಾತ್ಮಕ ಮನೋಧರ್ಮವೆನಿಸಿದೆ. ವೈದಿಕ ಮೊದಲಾದ ಧರ್ಮಗಳು ಪರಮಾತ್ಮನ್ನು ಸಾಕಾರ ರೂಪದಲ್ಲಿ ಮೂರ್ತೀಕರಿಸಿ, ದೇವಾಲಯ ಕಟ್ಟುತ್ತವೆ. ಬೌದ್ಧ, ಜೈನ ಧರ್ಮಗಳು ಪರಮಾತ್ಮನನ್ನು ನಿರಾಕರಿಸಿದರೂ ಜಿನ, ಬುದ್ದರಂಥ ಮಹಾತ್ಮರನ್ನು ಪರಮಾತ್ಮ ಸ್ಥಾನದಲ್ಲಿ ಗೌರವಿಸಿ, ಅವರ ಹೆಸರಿನಲ್ಲಿ ಸ್ಮಾರಕಗಳನ್ನು ನಿರ್ಮಿಸುತ್ತವೆ. ಪರಮಾತ್ಮನನ್ನು ನಿರಾಕಾರ ರೂಪದಲ್ಲಿ ಸ್ವೀಕರಿಸಿದ ಮತ್ತು ಮಹಾತ್ಮರನ್ನು ಪರಮಾತ್ಮರೆಂದು ಭಾವಿಸಿದ ಕ್ರೈಸ್ತ, ಮುಸಲ್ಮಾನ ಮತ್ತು ವೀರಶೈವಧರ್ಮಗಳು ಸಮೂಹ ಸಂಸ್ಕೃತಿಗಾಗಿ ಚರ್ಚು, ಮಸೀದೆ ಮತ್ತು ಅನುಭವಮಂಟಪಗಳಂಥ, 'ಮಂದಿರ'ಗಳನ್ನು ನಿರ್ಮಿಸುತ್ತವೆ. ಈ ಬಗೆಯ ಧರ್ಮಗಳು ತಮ್ಮನ್ನು ರಕ್ಷಿಸಿಕೊಳ್ಳುವುದರೊಂದಿಗೆ ತಮ್ಮ ವಲಯವನ್ನು ವಿಸ್ತರಿಸಿಕೊಳ್ಳುವಕೆಲಸದಲ್ಲಿಯು ನಿರತವಾಗುತ್ತ ಬಂದಿವೆ. ಸಬಲವಾಗುವಿಕೆಯನ್ನು "ಜೈನೀಕರಣ ಕ್ರಿಯೆ" ಎಂದು ಕರೆದ ಡಾ. ಎಂ. ಎಂ. ಕಲಬುರ್ಗಿಯವರು ದುರ್ಬಲವಾಗುವಿಕೆಯನ್ನು "ಅಜೈನಿಕರಣ ಕ್ರಿಯೆ ಎಂದಿದ್ದಾರೆ." ಮುಂದುವರೆದು 'ಜೈನ ನಿರ್ಮಾಣಗಳ ನಾಶ ಶೈವರಿಂದ' ಎಂಬ ವಿಷಯವನ್ನು ಪ್ರಸ್ತಾಪಿಸುತ್ತ ತೆರದಾಳ ನೇಮಿತೀರ್ಥಂಕರದ ಬಸದಿಯಲ್ಲಿ ಜೋಗವಟ್ಟಿಗೆ ಇಟ್ಟ ಸಂಗತಿಯತ್ತ ಗಮನ ಸೆಳೆದಿದ್ದಾರೆ. ಈ ನಾಡಿನ ಬಳ್ಳಗೇರಿ ಶಾಸನದಲ್ಲಿ ಲಾಕುಳ ಶೈವರು ಪ್ರಭಾವಶಾಲಿಯಾಗಿದ್ದು, ಜೈನ ಮತ್ತು ಶೈವರಲ್ಲಿ ಮನಸ್ತಾಪವಾಗಿ ಇವರಲ್ಲಿ ಸಂಧಾನಕ್ಕೆ ಬಂದು ಬಳ್ಳಂಗೇರೆಯ (ಬಳಗೇರಿಯ) ಶ್ರೀ ಪಾರ್ಶ್ವತೀರ್ಥ ಕಾಳಿದಾಸ ಜಿನಾಲಯಕ್ಕೆ ಆ ಊರಿನ ಸಮಸ್ತ ಪ್ರಥಮ ಗಣಂಗಳು "ಜೋಗವಟ್ಟಿಗೆಯನಿಕ್ಕಿ ಪಂಚಮಹಾಶಬ್ದ ಮುಮಂ

ಸಮ" ಎಂದು ಸ್ಪಷ್ಟಪಡಿಸಿದೆ. ಈ ಜೋಗವಟ್ಟಿಗೆ ಕುರಿತು ಡಾ. ಎಂ. ಎಂ. ಕಲಬುರ್ಗಿಯವರು ದುರ್ಬಲಗೊಳ್ಳುತ್ತ ನಡೆದ ಜೈನಧರ್ಮ, ವೈಷ್ಣವಕ್ಕಿಂತ ಶೈವಕ್ಕೆ ಹೆಚ್ಚು ಶರಣಾಗತವಾದಂತಿದೆ. ಈ ಮಾತಿಗೆ ಸ್ಪಷ್ಟೀಕರಣವೆಂಬಂತೆ ಬಳಗೇರಿಯ ಶಾಸನದಲ್ಲಿ ರಾಮೇಶ್ವರ ದೇವರ ಸಮಸ್ತ ಪ್ರಥಮಗಣಂಬೆರೆಸು ಜೊಗವಟ್ಟಿಗೆ ಇಟ್ಟಿದ್ದರು ಎಂದು ಹೇಳದೆ. ಇಲ್ಲಿ ಪ್ರಥಮ ಗಣವು ಶೈವಾಗಮವಾಗಿದೆ. ಜೈನರು ತಮ್ಮ ಬಸದಿಗಳನ್ನು ವೈಷ್ಣವರ ವಶಕ್ಕೆ ಒಪ್ಪಿಸುತ್ತಿದ್ದಂತೆ, ಈ ಸಂದರ್ಭದಲ್ಲಿ ಶೈವರ ರಕ್ಷಣೆಗೂ ಒಪ್ಪಿಸಿ ಜೈನರು ಶೈವರಿಂದ ಜೋಗವಟ್ಟಿಗೆ, ನಂದಿಕೋಲುಗಳನ್ನು ಪಡೆದು ತಮ್ಮ ಬಸದಿಯಲ್ಲಿಟ್ಟುಕೊಂಡು ಅವುಗಳಿಗೆ "ಎಕ್ಕೋಟಿ ಜಿನಾಲಯ"ವೆಂದು ತಾವೇ ನಾಮಕರಣ ಮಾಡುತ್ತಿದ್ದರು. ಕೊಲ್ಲಾಪುರದ ರೂಪನಾರಾಯಣ ಬಸದಿಗೆ ಪ್ರತಿಬದ್ಧವಾಗಿದ್ದ ಕ್ರಿ. ಶ. ೧೧೮೧ರ ತೇರಿದಾಳ ನೇಮಿತೀರ್ಥಂಕರ ಬಸದಿಯನ್ನು ಅದೇ ಗ್ರಾಮದ ಶೈವ ಕಲಿದೇವರ ದೇವಾಲಯಕ್ಕೆ ಪ್ರತಿಬದ್ಧ ಮಾಡುವಾಗ "ಇಗ್ಗಳಯ ಜೋಗವಟ್ಟಿಗೆ ಸ್ಥಳವೆಂದು ಹೆಸರಿಸಿ, ಬಸದಿಯಲ್ಲಿ ಜೋಗವಟ್ಟಿಗೆಯನ್ನು ಇಟ್ಟರೆಂದೂ ಬಸದಿಯ ಮೇಲೆ ಶೂದ್ರಕ, ಸಿಂಹ, ಛತ್ರ, ಈ ಚಿಹ್ನೆಗಳನ್ನು ಸ್ಥಾಪಿಸಿದ್ದರೆಂದು, ಈ ದೇವರಿಗೆ ತ್ರಿಶೂಲದ ಘಂಟೆ, ಪರೆಗಳ ಮರ್ಯಾದೆಯಿದೆಯೆಂದು ನಿರ್ಣಯಿಸಿದ ಸಂಗತಿ ಈ ಶಾಸನ ತಿಳಿಸುತ್ತದೆ. ಕ್ರಿ. ಶ. ೧೦೭೫ರ ಕುಪ್ಪಟುರು ಶಾಸನ ಜಿನಾಲಯ ಬ್ರಾಹ್ಮಣರೊಂದಿಗಿನ ಒಪ್ಪಂದ ಸೂಚಕವಾಗಿ "ಬ್ರಹ್ಮ ಜಿನಾಲಯ"ವೆಂದು ಕರೆಯಿಸಿಕೊಳ್ಳುತ್ತ, ಶೈವರೊಂದಿಗೆ ಒಪ್ಪಂದ ಸೂತ್ರವಾಗಿ ಜೋಗವಟ್ಟಿಗೆಯನ್ನು ಇಟ್ಟುಕೊಂಡ ವಿಷಯ ಅಲ್ಲಿಯ ಶಾನದಲ್ಲಿದೆ."[೨೨] ಕನಂಬಡೆಯ ಬಳಗೇರಿ ಶಾಸನ[೨೩] ಪಂಚಮಹಾಶಬ್ದಮುಮಂ ಎಂದು ಹೇಳಿರುವುದರಿಂದ ಮೇಲೆ ಹೇಳಿದ ಶೂದ್ರಕ, ಸಿಂಹ, ಛತ್ರ, ದೇವರ ತ್ರಿಶೂಲದ ಘಂಟೆ ಪರೆಗಳ ಮರ್ಯಾದೆ ಇವು 'ಪಂಚಮಹಾಶಬ್ದ' ವಾದ್ಯಗಳಾಗಿರಬೇಕು. ಡಾ. ಎಂ. ಎಂ. ಕಲಬುರ್ಗಿಯವರು ಈ ಸಂಪ್ರದಾಯ ಕ್ರಿ. ಶ. ೧೧೦೪ ರಿಂದ ೧೩ನೇ ಶತಮಾನದವರೆಗೂ, ವಿಜಾಪೂರ ಜಿಲ್ಲೆಯಿಂದ ದಕ್ಷಿಣ ಕನ್ನಡ ಜಿಲ್ಲೆ, ಶಿವಮೊಗ್ಗ ಜಿಲ್ಲೆ, ಹಾಸನ ಜಿಲ್ಲೆ, ತುಮಕೂರು ಜಿಲ್ಲೆ, ಮಂಡ್ಯ ಜಿಲ್ಲೆಗಳವರೆಗೂ ವ್ಯಪಿಸಿದಿತೆಂದು ಹೇಳಿದ್ದಾರೆ. ಆದರೆ ಈ ಸಂಪ್ರದಾಯ ಬೆಳಗಾಂವ ಜಿಲ್ಲೆಯವರೆಗೂ ವ್ಯಾಪಿಸಿತೆಂದು ಬಳಗೇರಿ ಶಾಸನದಿಂದ ಸ್ಪಷ್ಟವಾಗುತ್ತದೆ.

**ವೈಷ್ಣವ ಧರ್ಮ:**

ಕನ್ನಡದಲ್ಲಿ ಲಭ್ಯವಾಗಿರುವ ಅತ್ಯಂತ ಪ್ರಾಚೀನವಾದ ಹಲ್ಮಿಡಿ ಶಾಸನ ವಿಷ್ಣು ಪ್ರಾರ್ಥನೆಯೊಂದಿಗೆ ಪ್ರಾರಂಭವಾಗುತ್ತದೆ. ಆದ್ದರಿಂದ ಈ ಶಾಸನದ ಕಾಲ ಕ್ರಿ. ಶ. ೪೫೦ಕ್ಕಿಂತ ಪೂರ್ವದಿಂದಲೂ ವೈಷ್ಣವಧರ್ಮ ಕರ್ನಾಟಕದಲ್ಲಿ ಪ್ರಚಲಿತವಿದ್ದತೆಂದು ನಂಬಬಹುದಾಗಿದೆ. ಬಾದಾಮಿ ಚಾಲುಕ್ಯ ಅರಸು ಮಂಗಳೇಶ ತನ್ನನ್ನು ಮಹಾಭಾಗವತ ಎಂದು ಹೇಳಿಕೊಂಡು. ಬಾದಾಮಿಯಲ್ಲಿ ವೈಷ್ಣವ ಗುಹಾಲಯ ಕಟ್ಟಿಸಿರುವ ಸಂಗತಿ ತುಂಬ

ಪ್ರಸಿದ್ಧವಾಗಿದೆ. ವೈಷ್ಣವ ಧರ್ಮದ ಬ್ರಾಹ್ಮಣರು ಅಗ್ರಹಾರದ ಮಹಾಜನರೆಸಿ ಅಲ್ಲಿನ ಆಡಳಿತ ನೋಡಿಕೊಳ್ಳುವುದರೊಂದಿಗೆ ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ ಪ್ರತಿಗ್ರಹ ಮೊದಲಾದ ಷಟ್ಕರ್ಮಗಳಲ್ಲಿ ನಿರತರಾಗಿತ್ತಿದ್ದರು. ಪ್ರಾಚೀನ ಸಮಾಜ ವ್ಯವಸ್ಥೆಯಲ್ಲಿ ವರ್ಣಾಶ್ರಮ ಧರ್ಮವನ್ನು ಚಾಚೂ ತಪ್ಪದೆ ಅನುಸರಿಸಿಕೊಂಡು ಬಂದ ಇವರು ರಾಜಕೀಯ ವ್ಯವಸ್ಥೆಯಲ್ಲಿ ಪ್ರಮುಖಸ್ಥಾನ ವಹಿಸಿದ್ದರು. ಕಣಂಬಡೆ ನಾಡಿನಲ್ಲಿ ಸುಮಾರು ೧೧ ವೈಷ್ಣವ ದೇವಾಲಯಗಳಿವೆ. ಕೊಕಟನೂರು ಶಾಸನವು ಕಣಂಬಡೆ ಮೂನ್ನೂರನ್ನು ಆಳುತ್ತಿದ್ದ ಸಮಯದಲ್ಲಿ ಕೊಕಟನೂರು ಅಗ್ರಹಾರದ ಶ್ರೀ ಭಾವಸುದ್ಧ ದೇವರಿಗೆ ಉತ್ತರಾಯಣ ಸಂಕ್ರಾಂತಿ ಹಬ್ಬದ ನಿಮಿತ್ಯ ಮಹಾಪ್ರಭು ಪಾರ್ವರ ಬಲ್ಲದ ದತ್ತಿ ನೀಡಿದ್ದನ್ನು ಹೇಳಿದೆ.

ತುಂಗಳದ ಶಾಸನವು ಕಣಂಬಡೆ ನಾಡಿನ ಅಧಿಕಾರಿ ಚಿದ್ದರಸ ದಂಡನಾಯಕ ಪ್ರಮುಖ ಶ್ರೀಕರಣಗಳು ಮತ್ತು ತುಂಗಳ ಅಗ್ರಹಾರದ ಚೌಡಭಟ್ಟೋಪಾಧ್ಯಾಯರು ಸೇರಿ ಚನ್ನಕೇಶವ ದೇವರ ಗಂಧ, ಧೂಪ, ಖಂಡಸ್ಫುಟಿತ ಜೀರ್ಣೋದ್ಧಾರಕ್ಕಾಗಿ ದಾನ ನೀಡಿದ್ದನ್ನು ಸ್ಪಷ್ಟಪಡಿಸಿದೆ. ಚಾಲುಕ್ಯ ಸೋಮೇಶ್ವರ ನಾಲ್ಕನೇ ಮಂತ್ರಿ ಚಮುಪತಿ ಸೋಮನು ಸತ್ತತಿ ಅಗ್ರಹಾರದ ನರಸಿಂಹದೇವರಿಗೆ ಕೊಡಗನೂರು ಹಳ್ಳಿಯನ್ನು ದತ್ತಿ ಬಿಟ್ಟಿದ್ದನ್ನು ಮುರಗುಂಡಿ ಶಾಸನ ಪ್ರಸ್ತಾಪಿಸಿದೆ. ಬಳಗೇರಿ ಶಾಸನವು ನರಸಿಂಹ ದೇವರ ಸ್ತುತಿಯೊಂದಿಗೆ ಪ್ರಾರಂಭವಾಗಿದೆ. ಶಾಸನದಲ್ಲಿ ಅಹವಮಲ್ಲನು ವಿಷ್ಣುವಿನ ಭಕ್ತನಾಗಿದ್ದನೆಂದು ನಿರೂಪಿಸಿದೆ. ಬಾಡಗಿ ಶಾಸನವು ತುಂಗಳ ಮತ್ತು ಬಾಡಗಿಯ ಪ್ರಭುತ್ವವನ್ನು ಅನುಭವಿಸುತ್ತಿದ್ದಾಗ ಮೈಲುಗಿದೇವನ ಅನುಮತದಿಂದ ಶ್ರೀಲಕ್ಷ್ಮಣೇಶ್ವರ ದೇವರಿಗೆ ಭೂಮಿಯನ್ನು ಮತ್ತು ನೈವೇಧ್ಯಕ್ಕೆ ಗದ್ದೆಯನ್ನು ಬಿಟ್ಟಿದ್ದನ್ನು ಹೇಳಿದೆ. ವಿಶ್ವಾಮಿತ್ರಗೋತ್ರದ ಪವಿತ್ರ ಚೂಡಾಮಣಿ ಮಂಕಣ ಭಟ್ಟೋಪಾಧ್ಯಾಯರು ಲಕ್ಷ್ಮಣೇಶ್ವರ ದೇವರ ಆಚಾರ್ಯರಾಗಿದ್ದನ್ನು ಸ್ಪಷ್ಟಪಡಿಸುತ್ತದೆ.

**ಕಾಳಾಮುಖ ಶೈವ – ವೀರಶೈವ:**

ಶೈವ ಧರ್ಮವು ಅತಿ ಪುರಾತನವಾದುದು. ಇದರಲ್ಲಿ ಅನೇಕ ಭೇದಗಳಿರುವುದನ್ನು ಪ್ರಾಚೀನ ದರ್ಶನ ಶಾಸ್ತ್ರಕಾರರು ಗುರುತಿಸಿದ್ದಾರೆ. ವಾಚಸ್ಪತಿ ಮಿಶ್ರರು, ಮಹೇಶ್ವರರನ್ನು ನಾಲ್ಕು ಪಂಗಡವಾಗಿ ವಿಂಗಡಿಸುತ್ತಾರೆ. ಅವು ಶೈವ, ಪಾಶುಪತ, ಕಾಪಾಲಿಕ ಹಾಗೂ ಕಾರುಣಿಕ ರಾಮಾನುಜರ ಗುರುಗಳಾದ ಯಮುನಾಚಾರ್ಯರು ತಮ್ಮ 'ಆಗಮ ಪ್ರಾಮಾಣ್ಯ ಹೆಸರಿನ ಗ್ರಂಥದಲ್ಲಿ ಶೈವರು, ಪಾಶುಪತರು, ಕಾಪಾಲಿಕರು ಹಾಗೂ ಕಾಳಾಮುಖರನ್ನೆಲ್ಲ ಸೇರಿಸಿಯೇ ಪಟ್ಟಿಮಾಡಿದ್ದಾರೆ.' ಪಾಶು ಪತ ಶಾಖೆಯ ಸ್ಥಾಪಕನಾದ ಲಕುಲೀಶನು ವಾಯುಪುರಾಣ, ಶಿವಪುರಾಣ, ಲಿಂಗಪುರಾಣ ಮತ್ತು ಸೂತ ಸಂಹಿತೆಗಳಲ್ಲಿ ಉಕ್ತನಾಗಿದ್ದು ಶಿವನು ರುದ್ರನ ಒಂದು ಅವತಾರವಾಗಿ, ಗುಜರಾತಿನ ಕಾಯಾರೋಹಣದಲ್ಲಿ

ಹುಟ್ಟಿದವನೆಂದು ತಿಳಿದುಬರುತ್ತದೆ. ಲಕುಲೀಶ – ಪಾಶುಪತ ಮತ್ತು ಕಾಳಾಮುಖಗಳೆರಡು ಒಂದೇ. ಅವು ಶೈವ ಧರ್ಮಕ್ಕೆ ಇರುವ ಇನ್ನೆರಡು ಹೆಸರುಗಳು. ಪಾಶುಪತ, ಕಾಳಾಮುಖ, ಕಾಪಾಲಿಕರಲ್ಲಿ ಪಾಶುಪತ ಕಾಳಾಮುಕರು ತಮ್ಮ ಸಾತ್ವಿಕ ಆಚರಣೆಗಳಂದ ಒಂದೇ ಗುಂಪಿಗೆ ಸೇರುತ್ತಾರೆ. ಮುಖದ ಮೇಲೆ ಕಪ್ಪು ಗೆರೆಗಳನ್ನು (ಭಸ್ಮವನ್ನು) ಹಚ್ಚಿಕೊಳ್ಳುವ ಮೂಲಕ ಕಾಳಾಮುಖ (ಅಸಿತವಕ್ತ್ರ) ರೆನ್ನಿಸಿಕೊಂಡಿರಬಹುದಾದ ಇವರಿಗೂ ದಿನದಲ್ಲಿ ಮೂರು ವೇಳೆ ಭಸ್ಮ ಸ್ನಾನ ಮಾಡಬೇಕೆನ್ನುವ ಪಾಶುಪತರಿಗೂ ಯಾವುದೇ ವ್ಯತ್ಯಾಸವಿದ್ದಂತಿಲ್ಲ. ಕನ್ನಡ ಶಾಸನಗಳು ಎಲ್ಲಿಯೂ ಇವರಿಬ್ಬರು ಬೇರೆ ಬೇರೆ ಎಂದು ಸ್ಪಷ್ಟವಾಗಿ ಹೇಳಿಲ್ಲ. ಹನ್ನೊಂದನೆಯ ಶತಮಾನ ಕಲ್ಯಾಣ ಚಾಲುಕ್ಯರು ವೃಭವದಿಂದ ರಾಜ್ಯಭಾರ ಮಾಡುತ್ತಿರುವ ಕಾಲ. ಈ ಅವಧಿಯಲ್ಲಿ ಜೈನಧರ್ಮ ತನ್ನ ಗತವೈಬವದ ಕನಸಿನಿಂದ ಎಚ್ಚೆತ್ತು ತಾಂತ್ರಿಕ ಆಚರಣೆಗಳ ಮೂಲಕ ಜನಪ್ರಯತೆ ಗಳಿಸುವ ಹವಣಿಕೆಯಲ್ಲತ್ತು. ಕರ್ನಾಟಕದ ದಕ್ಷಿಣ ಹಾಗೂ ದಕ್ಷಿಣ ಪೂರ್ವ ಭಾಗಗಳಲ್ಲಿ ಪ್ರಗಲ್ಭ ಸ್ಥಿತಿಯಲ್ಲಿದ್ದ ವೈಷ್ಣವಧರ್ಮ ಉತ್ತರ ಭಾಗದ ಶೈವರೊಂದಿಗೆ ಹೊಂದಾಣಿಕೆ ಮತ್ತು ಅನುಸಂಧಾನ ನಡೆಸಿತ್ತು. ಈ ಸಮಯದಲ್ಲಿ ಸಾಮಾನ್ಯರೊಂದಿಗಿನ ನಿಕಟ ಸಂಬಂಧ ಮತ್ತು ರಾಜಕೀಯ ಪೋಷಣೆಯ ದೃಷ್ಟಿಯಿಂದ ಹೆಚ್ಚಿನ ಗವರವ ಪಡೆದ ಕಾಳಾಮುಖ ಪಾಶುಪತರು ತಮ್ಮ ಸ್ಥಾನ ಭದ್ರ ಪಡಿಸಿಕೊಂಡಿದ್ದರು. ಮುಂದೆ ಆಳ್ವಕೆ ವಹಿಸಿದ ಕಲಚೂರಿ ಮತ್ತು ಯಾದವ ಅರಸುಮನೆತನಗಳ ಕಾಲಕ್ಕೂ ಆ ಸ್ಥಾನ ಸಡಿಲಗೊಳ್ಳಲಿಲ್ಲವೆಂಬುದು ಈ ನಾಡಿನ ಶಾಸನಗಳ ಅಧ್ಯಯನದಿಂದ ಸ್ಪಷ್ಟವಾಗುತ್ತದೆ.

ಈ ನಾಡಿನಲ್ಲಿ ಆಳ್ವಿಕೆ ಮಾಡಿದ ಅರಸರು, ಸಾಮಂತರು, ಮಹಾಮಂಡಳೇಶ್ವರರು, ಪ್ರಭುಗಳು ಮತ್ತು ಮಹಾಜನರು, ವರ್ತಕರು, ಸಾಮಾನ್ಯ ಜನರು ಇಲ್ಲಿನ ಶೈವ ದೇವಾಲಯಗಳ ಪೂಜೆ, ಪುರಸ್ಕಾರ, ದೇವರ ಅಂಗಭೋಗ – ರಂಗಭೋಗ, ಖಂಡಸ್ಫುಟಿತ ಜೀರ್ಣೋದ್ಧಾರ, ತಪೋಧನ ವಿದ್ಯಾರ್ಥಿಗಳ ಆಹಾರ, ಬ್ರಾಹ್ಮಣರ ಸತ್ರಕ್ಕೆ ದಾನ ನೀಡಿದ ಕುರಿತು ಅನೇಕ ಉಲ್ಲೇಖಗಳು ಶಾಸನಗಳಲ್ಲಿ ಬಂದಿವೆ. ಕಲ್ಯಾಣ ಚಾಲುಕ್ಯ ಆರನೇ ವಿಕ್ರಮಾದಿತ್ಯನು ಕಲ್ಯಾಣದ ನೆಲೆವೀಡಿನಲ್ಲಿ ರಾಜ್ಯಭಾರಮಾಡುತ್ತಿದ್ದಾಗ ಕರಹಡ ನಾಲ್ಸಾಸಿರ ಮತ್ತು ಮಿರಿಂಜೆ ಮೂರು ನೂರು ಪದರದೇಶಗಳನ್ನು ಆಳುತ್ತಿದ್ದ ಮಹಾಮಂಡಳೇಶ್ವರ ಜೋಗಪಯ್ಯರಸ ಮತ್ತು ಆತನ ಅರಸಿ ಪೊಲ್ಲಿಕಬ್ಬೆಯರು ಕೊಕಟನೂರಿನಲ್ಲಿ ಕೂಚಿಸೆಟ್ಟಿ ಮಾಡಿಸಿದ ತ್ರೈಪುರುಷ ದೇವಾಲಯಕ್ಕೆ ಜನ್ನವಾಡ ಗ್ರಾಮವನ್ನು ದತ್ತಿಬಿಟ್ಟುಕೊಟ್ಟಿರುವ ಸಂಗತಿ ಶಾಸನವೊಂದರಲ್ಲಿದೆ ರಾಮತೀರ್ಥ ಶಾಸನವು ತ್ರಿಭುವನಮಲ್ಲದೇವನ ಪಟ್ಟಮಹಾದೇವಿಯ ಮಗ ಯುವರಾಜ ಮಲ್ಲಿಕಾರ್ಜುನದೇವರು ಕರಹಡ ನಾಲ್ಸಾಸಿರವನ್ನು ಆಳ್ವಿಕೆ ಮಾಡುತ್ತಿದ್ದಾಗ ಶ್ರೀಮನ್ಮಹಾಮಂಡಳೇಶ್ವರ ಪೆರ್ಮಾರ್ಮಡಿಯು ಸ್ವಂಯಂಭು ರಾಮೇಶ್ವರ ದೇವರ ಸ್ಥಾನಾಚಾರ್ಯ ಶಿವಸಕ್ತಿ ಪಂಡಿತರಿಗೆ ದತ್ತಿ ಬಿಟ್ಟಿದ್ದನ್ನು ಹೇಳಿದೆ.

ಲಾಕುಳ ಪಾಶುಪತ ಕಾಳಾಮುಖ ಧರ್ಮವನ್ನು ಶಿವಮಯ ಶಿವಧರ್ಮ ಎಂದು ಕರೆದಿರುವುದು ಕಣಂಬಡೆ ನಾಡಿನ ಶಾಸನಗಳಲ್ಲದೆ. ತೆಲಸಂಗದ ಶಾಸನವು ಅಗ್ರಹಾರದ ಮಹಾಜನಂಗಳು ಉತ್ತರಾಯಣ ಸಂತ್ರಾಂತಿಯ ನಿಮಿತ್ಯವಾಗಿ ರೇವಣೇಶ್ವರ ದೇವರ ರಂಗಭೋಗ, ಖಂಡಸ್ಫುಟಿತ ಜೀರ್ಣೋದ್ಧಾರಕ್ಕಾಗಿ ದತ್ತಿ ಬಿಟ್ಟಿದ್ದನ್ನು ಸ್ಪಷ್ಟಪಡಿಸಿದೆ. ಕಣಂಬಡೆ ನಾಡಿನ 'ಮತ್ತೊಂದು ತೆಲಸಂಗ ಶಾಸನವು' ಉದಾತ್ತ ಸದ್ಗುಣವುಳ್ಳ, ಸದಾಚಾರ ಸಂಪನ್ನರಾದ, ಅರ್ಶರೀತ ರಕ್ಷಣದ ಶಿವಭಕ್ತರಿದ್ದರೆಂದು ತಿಳಿಸಿದರೆ, ಕೊಕಟನೂರು ಶಾಸನವು 'ಶೈವಮಾರ್ಗ' ಕುರಿತು ವಿವರಿಸಿದೆ. ಯಾದವ ಸಿಂಘಣನ ಕಾಲದಲ್ಲಿ ಶೈವಧರ್ಮ ತನ್ನ ಮಹತ್ವವನ್ನು ಕಳೆದುಕೊಂಡಿರಲಿಲ್ಲ ಎಂಬುದಕ್ಕೆ ಇದು ನಿದರ್ಶನವಾಗಿದೆ. ಕಣಂಬಡೆ ಮುನ್ನೂರರೊಳಗಿನ ಕೊಕಟನೂರು ಅಗ್ರಹಾರದಲ್ಲಿ ಚಂದಿನಾಥನ ಭಕ್ತನಾಗಿದ್ದ ಭಾಯಿದೇವನು "ಒಂದು ತಿಂಗಳು ಸದ್ಭಕ್ತಿ ಸಂಗದ ಗೋಷ್ಠಿಯೊಳದ್ದು, ಮತ್ತೆರಡು ತಿಂಗಳು ತನ್ನನೇಕ ಭಾವದಿಂದ ಇದ್ದು, ಮೂರನೆಯ ತಿಂಗಳು ಭಾಯ್ಯ ಡಂಗುರ ಹೊಯಿಸುತ ಸುರಲೋಕವ ಮುತ್ತಿದ ಎಂದಿದೆ. ಮೂರು ಕಂಗಳಲು ಅಷ್ಟವಿಧಾರ್ಚನೆ ನೇಮಂ ನಿಷ್ಠೆಯ ಲಿಂಗಾನುಪ್ರೇಮ, ಭಯ ಭಕ್ತಿ, ಚಲಂ, ಸೃಷ್ಟಿ ಗತಿ, ಹೊಸತು. ಶಿವಪಥ, ದೃಷ್ಟಾಂತಂ ಕಂಡು ಭಾಯ್ಯ ಲಿಂಗನುಗೊಂಡಂ" ಎಂದು ಹೇಳಿರುವ ಶಿವಪಥವು ಶೈವ ಮಾರ್ಗವಾಗಿದೆ. ನೇಮ, ಲಿಂಗಾನು ಪ್ರೇಮ, ಭಯಭಕ್ತಿ ಮುಂತಾದ ಪದಗಳಿಂದ ಆತ ಪರಮೇಶ್ವರನಲ್ಲಿ ಉತ್ಕಟವಾದ ಭಕ್ತಿ ಹೊಂದಿದ್ದ ಎನ್ನುವುದು ಸ್ಪಷ್ಟವಾಗುತ್ತದೆ.ಇದೇ ಶಾಸನದ ೨೬ನೆಯ ಸಾಲಿನಿಂದ ೩೧ನೆಯ ಸಾಲಿನವರೆಗೆ 'ಶಿವಗಣದ' ವರ್ಣನೆಯಿದೆ. ಶಿವಗಣಗಳಲ್ಲಿ ಕೆಲವರು ಅಣುವಿಗಿಂತಲೂ ಕಿರಿಯರು ಕೆಲವರು ರಜತಾದ್ರಿಗಿಂತ ದೊಡ್ಡವರಾಗಿ ಬೆಳೆದವರು. ಕೆಲವರು ಕಾಮನಂತೆ ಸುಂದರರು, ಕೆಲವರು ಅಂಜಿಕೆಯನ್ನುಂಟುಮಾಡುವ ಕರಾಳರೂಪಧಾರಿಗಳಾಗಿದ್ದರು. ಕೆಲವರು ಸೌಮ್ಯ ರೂಪಧಾರಿಗಳಾಗಿ ದಯಾಪರರು, ಕೆಲವರು ಇಂದ್ರಿಯನಿಗ್ರಹಿಗಳಾಗಿದ್ದರೆ ಕೆಲವರೂ ರತಿಲೋಲರು. ಈ ಗಣೇಶ್ವರರಲ್ಲಿ ಅಜಾಂಡಕೋಟಿಗಳನ್ನು ಹುಟ್ಟಿಸುವ ಸಾಮರ್ಥ್ಯವೂ ನಿಮಿಷಾರ್ಧದಲ್ಲಿ ಅವುಗಳನ್ನೆಲ್ಲ ನಾಶಗೊಳಿಸುವ ಸಾಮರ್ಥ್ಯವುಳ್ಳವರು ಎಂದು ಹೇಳಿದೆ. ಭಾಯಿ ದೇವನನ್ನು ಶಾಸನ "ಸ್ಥಾವರಜಂಗಮಂ ದ್ವಿವಿಧಲಿಂಗಮುಂ" ಎಂದಿದೆ. ಬಹುಶಃ ಈತ ಶೈವ ಬ್ರಾಹ್ಮಣನಾಗಿರಬೇನಿಸುತ್ತದೆ. ಇದೆ ಶಾಸನದಲ್ಲಿ ಭಾಯಿದೇವನ ಶಿಷ್ಯ ಮಲ್ಲಿದೇವನನ್ನು, ಶಿವೈಕ್ಯನು, ವಿಪ್ರರಾಜ ಪ್ರಭುಗಣಾಗ್ರಣಿ ಕುಲದೀಪಕನು, ಪಾರ್ಬರ ಬಲ್ಲಹ (ಬ್ರಾಹ್ಮಣ ಶ್ರೇಷ್ಠ) ಎಂದು ಸಂಭೋಧಿಸಿರುವುದರಿಂದ ಈತನೂ ಶಿವಾಗಮಾನುಯಾಯಿ ಬ್ರಾಹ್ಮಣನಾಗಿರಬೇಕು. ಪಾಶುಪತ ಶೈವರ ಮುಖ್ಯ ಕೊಡುಗೆಯೆಂದರೆ ದೇವಾಲಯ ಮತ್ತು ಮಠ ನಿರ್ಮಾಣ, ದೇವಾಲಯವನ್ನು ಕಟ್ಟಿಸಿ ತಮ್ಮ ಹೆಸರಿನಲ್ಲಿ ಲಿಂಗವನ್ನು ಸ್ಥಾಪಿಸಿದವರು ದೇವರೇ ಆಗುತ್ತಾರೆಂಬ ಆಗಮವಾಕ್ಯದ ಮೇರೆಗೆ ಆ ಕಾಲದಲ್ಲಿ ಅನೇಕರು ತಮ್ಮ ಮತ್ತು ತಮ್ಮ

ಪರಿವಾರದವರ ಹೆಸರಿನಲ್ಲಿ ದೇವಾಲಯಗಳನ್ನು ಕಟ್ಟಿಸುತ್ತಿದ್ದರು. ಉಮ್ರಾಣಿ ಶಾಸನವು ಮಹಾಮಂಡಳೇಶ್ವರ ಹೆಮ್ಮಾಡಿ ಅರಸನು ಉಂಬರವಾಣಿಯಲ್ಲಿ ಹೆಮ್ಮೇಶ್ವರ ದೇವಾಲಯ, ಪತ್ನಿ ಚಂದಲದೇವಿಯ ಹೆಸರಿನಲ್ಲಿ ಚಂದಲೇಶ್ವರ ದೇವಾಲಯ ಕಟ್ಟಿಸಿದ ಸಂಗತಿ ಹೇಳಿದೆ.

ಕಣಂಬಡೆ ನಾಡಿನಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಶೈವ ದೇವಾಲಯಗಳಿರುವದು ಶಾಸನಗಳಿಂದ ಸ್ಪಷ್ಟವಾಗುತ್ತದೆ. ಇವು ಪಾಶುಪತ ಕಾಳಾಮುಖರ ಪ್ರಮುಖ ನೆಲೆಗಳಾಗಿದ್ದವು. ಈ ದೇವಾಲಯಗಳಲ್ಲಿ ವಾಸವಾಗಿದ್ದ ಪಾಶುಪಾತ ಕಾಳಾಮುಕ ಯತಿಗಳು ಸ್ಥಾನಾಚಾರ್ಯರು. ಇವರು ಯಮನಿಯಮ ಸ್ವಾಧ್ಯಾಯ ಧ್ಯಾನ ಧಾರಣ ಮೋನಾನುಷಠಾನ ಜಪಸಮಾಧಿ ಸಂಪನ್ನರಾಗಿದ್ದುಕೊಂಡು, ನೈಷ್ಠಿಕ ಬ್ರಹ್ಮಚಾರಿಗಳಾಗಿ ದೇವಾಲಯದ ಮತ್ತು ಮಠದ ಆಡಳಿತವನ್ನು ನೋಡಿಕೊಳ್ಳುತ್ತಿದ್ದರು. ಉಮ್ರಾಣಿ ಶಾಸನವು ಚಂದ್ರಾಭರಣ ಪಂಡಿತನನ್ನು ದೀನನಾಥ ಪೋಷಣ ದುರಿತ ಗಜಮದ ನಿವಾರಣ, ಪಂಡಿತ ಚೂಡಾಮಣಿ, ಶಿಷ್ಟಜನ ಚಿಂತಾಮಣಿ ಎಂದು ವರ್ಣಿಸಿದೆ.

ಕಾಳಾಮುಖ ಪಾಶುಪತ ಶೈವ ಧರ್ಮದ ಆಚಾರ್ಯರ ಹೆಸರಿನ ಮುಂದೆ, ರಾಶಿ, ಪಂಡಿತ, ಜೀಯ, ಶಕ್ತಿಯೆಂಬ ಉತ್ತರ ಪದಗಳು ಬಳಕೆಯಾಗುತ್ತದ್ದವು. ಶಿವಸಕ್ತಿ ಪಂಡಿತ ಲೋಕಾಭರಣ ಪಂಡಿತ ಚಂದ್ರಾಭರಣ ಪಂಡಿತದೇವ ವಿದ್ಯಾರಾಶಿ ಪಂಡಿತ ಸ್ಥಾನಾಚಾರ್ಯರು ವಿದ್ಯಾಪ್ರೇಮಿಗಳಾಗಿದ್ದು ದೇವಸ್ಥಾನ ಮಠಗಳಲ್ಲಿನ ತಪೋಧನರು ಮತ್ತು ವಿದ್ಯಾರ್ಥಿಗಳಿಗೆ ವಿದ್ಯಾದಾನದ ಏರ್ಪಾಟು ಮಾಡಿದ್ದಾರೆ. ಜೊತೆಗೆ ದೇವಾಲಯ ಕಟ್ಟಿಸುವುದು, ದಾನದತ್ತಿಗಳನ್ನು ಸ್ವೀಕರಿಸುವುದು, ಬೀಡುವುದು, ಸಂರಕ್ಷಿಸಿಕೊಂಡು ಬರುವುದು ಅವರ ಪ್ರಧಾನ ಕಾರ್ಯಗಳಾದ್ದವು.

**ಸಾಹಿತ್ಯ:**

ಸಾಹಿತ್ಯದ ದೃಷ್ಟಿಯಿಂದಲೂ ಶಾಸನಗಳು ಅಪೂರ್ವವಾದ ದಾಖಲೆಗಳಾಗಿವೆ. ಈ ನಾಡಿನ ಬಹುಪಾಲು ಶಾಸನಗಳು ದಾನಶಾಸನಗಳಾಗಿವೆ. ಶಾಸನದ ಭಾಷೆ ಯಾವುದೇ ಇರಲಿ, ಪ್ರಾರಂಭದಲ್ಲಿ ಸ್ತುತಿ ಪದ್ಯ, ಅಂತ್ಯದಲ್ಲಿ ಫಲಶೃತಿಪದ್ಯ ಸಾಮಾನ್ಯವಾಗಿ ಸಂಸ್ಕೃತ. ಅದರಲ್ಲಯೂ 'ನಮಸ್ತುಂಗ ಶಿರಶ್ಚುಂಬಿ' ಎಂಬ ಸ್ತುತಿ ಪದ್ಯ. 'ಸ್ವದತ್ತಂ ಪರದತ್ತಂ' ಎಂಬ ಫಲಶೃತಿ ವಾಕ್ಯಗಳು ಸಾಮಾನ್ಯವಾಗಿ ಸಂಸ್ಕೃತದಲ್ಲಿರುತ್ತವೆ. ಕೆಲವೊಮ್ಮೆ ವಿರಳವಾಗಿ ಕನ್ನಡ ಬಾಷೆಯಲ್ಲಿರುವ ಸ್ತುತಿ ಪದ್ಯ-ಫಲಶೃತಿ ವಾಕ್ಯಗಳು ಕಾಣಸಿಗುತ್ತವೆ. ಪಾರಂಪಾರಿಕ ಬಿರುದುಗಳು ಮತ್ತು ದಾನ ಕೊಟ್ಟ ವಿವರಣೆ ಗದ್ಯದಲ್ಲಿದ್ದರೆ, ದೇಶ ವರ್ಣನೆ, ಪುರವರ್ಣನೆ , ರಾಜ ಮತ್ತು ಮಂಡಳೇಶ್ವರ ಗುಣಗಾನ, ದಾನ ಕೊಡುವವನ ಉದಾರ ಮನೋಭಾವ ಹಾಗೂ ಸ್ವೀಕರಿಸುವ ಅರ್ಹತೆ ಮುಂತಾದ ವಿಷಯಗಳು ನಿರೂಪಣೆ ಶಾಸನ ಪದ್ಯಗಳಲ್ಲಿದ್ದು, ಕವಿಕಲ್ಪನೆಗೆ ಹಿಡಿದ ಕನ್ನಡಿಯಾಗಿದೆ. ರಾಜ, ಸಾಮಂತ, ಅಧಿಕಾರಿ, ಸಾಮಾನ್ಯ ಜನರು

ಯಾರೇ ಇದ್ದರೂ ಅವರಲ್ಲಿ ಅತ್ಯುನ್ನವಾದ ಆದರ್ಶಗಣಗಳನ್ನು ಹೇಳಿರುವುದರಿಂದ ಇಲ್ಲಿನ ವರ್ಣನೆಗಳು ಕೆಲವೊಮ್ಮೆ ಅತಿಶಯೋಕ್ತಿ ಮತ್ತು ಉತ್ಪ್ರೇಕ್ಷೆಗಳಾಗಿ ಕಂಡು ಬರುತ್ತದೆ.

**ಶಾಸನ ಸಾಹಿತ್ಯ:**

ಶಾಸನದಲ್ಲಿ ವಿವಿಧ ಸಾಹಿತ್ಯ ರೂಪಗಳು, ಛಂದಸ್ಸಿನ ಪ್ರಕಾರಗಳು ಕಂಡು ಬರುತ್ತವೆ. "ವಾಸ್ತವ ಸಂಗತಿಯೇನೆಂದರೆ ಪಕ್ಕಾ ಸಾಹಿತ್ಯವು ಶಾಸನ ಸಾಹಿತ್ಯಕ್ಕೆ ಆದರ್ಶ ಮತ್ತು ಪ್ರಚೋದಕ. ಪಕ್ಕಾ ಸಾಹಿತ್ಯದ ಏಳು ಬೀಳುಗಳನ್ನು ಶಾಸನ ಸಾಹಿತ್ಯವು ಅನುಸರಿಸಿದರೆ. ಪಂಪ, ರನ್ನ ಮೊದಲಾದ ಚಂಪುಕವಿಗಳ ಅನಂತರ ಕಾವ್ಯಮಯ ಶಾನಗಳ ಸಂಖ್ಯೆಯೂ ಅವುಗಳ ಗುಣವು ಹೆಚ್ಚುತ್ತಾ ಹೋಗುತ್ತದೆ." ಶಾಸನಗಳ ಮುಖ್ಯ ಉದ್ದೇಶ ಸಾಹಿತ್ಯ ರಚನೆಯಲ್ಲದಿದ್ದರೂ, ಸಾಹಿತ್ಯ ರೂಪಗಳಾದ, ಚಂಪೂ, ಗದ್ಯ, ಷಟ್ಪದಿ, ರಗಳೆ, ತ್ರಿಪದಿ, ಕಂದ ವೃತ್ತಗಳು ಗಮನಿಸಿದಾಗ ಸಾಹಿತ್ಯದ ರಾಶಿಯನ್ನು ಕಡೆಗಣಿಸುವಂತಿಲ್ಲ. ಈ ಶಾಸನ ಸಾಹಿತ್ಯಕ್ಕೆ ತನ್ನದೆ ಆದ ಒಂದು ವೈಶಿಷ್ಟ್ಯವಿದೆ ಎಂಬುದು ಗಮನಾರ್ಹ ಸಂಗತಿ. ಕಣಂಬಡೆ ನಾಡಿನ ಉಂಬರವಾಣಿ, ಕೊಕಟನೂರು, ತೆಲಸಂಗ, ಬಳಗೇರಿ, ರಾಮತೀರ್ಥ, ಸಿದ್ಧನಾಥ, ಮುರಗುಂಡಿ ಶಾಸನಗಳು ಹೆಚ್ಚು ದೀರ್ಘವಾಗಿದ್ದು, ಸೊಗಸಾದ ವರ್ಣನೆಗಳೊಂದ ಕೂಡಿವೆ. ಕೆಲವೊಮ್ಮೆ ಶಾಸನ ಕವಿಯ ಹೆಸರು ಕಂಡು ಬರದ ಸಂದರ್ಭದಲ್ಲಿ ಉತ್ತಮವಾದ ಕಾವ್ಯಗುಣವನ್ನು ಹೊಂದಿರುವುದನ್ನು ಕಾಣುತ್ತವೆ. ಜತ್ ತಾಲೂಕಿನ ಉಮ್ರಾಣಿಶಾಸನದಲ್ಲಿ ಕವಿಯು ಮಾಡುವ ಉಮ್ರಾಣಿ ವರ್ಣನೆ ಕಾವ್ಯಗುಣ ಹೊಂದಿರುವುದು ಗಮನಿಸಬಹುದಾಗಿದೆ.

ಇದರಲ್ಲಿ ೧೯ ಪದ್ಯಗಳಲ್ಲಿ ೧೩ ಕಂದ ಪದ್ಯವಾಗಿದೆ. ಉಮ್ರಾಣಿಯ ವರ್ಣನೆಯನ್ನು ಮಾಡುವ ಪದ್ಯವಿದು. ಮಹಾಜನರನ್ನು ವಣಿಸುವ ಉಮ್ರಾಣಿ ಶಾಸನ ಪದ್ಯ ಕಾವ್ಯಮಯವಾಗಿ ಮೂಡಿಬಂದಿದೆ.

**ಕಾಮಕ್ರೋಧವಿದೂರರಪ್ರತಿಮಮಾರ್ತ್ತಂಡೋಜ್ವಳ ಭ್ರಾಜಿತ –**
**ಶ್ರೀಮತ್ ಕೀರ್ತ್ತಿವಿಶಾಳರಬ್ಜಜಚರಿತ್ರೋದ್ಭಾಸಿಗಳ್ ರುಗ್ಯೆಜು –**
**ಸ್ಸ್ಯಾ(ಸ್ಸಾ) ಮಾಥರ್ಬ್ಬಣವೇದಪಾರಗರಿಳಾಧೀಶಾರ್ಚ್ಚಿತರ್ಸ್ಸತ್ಯಸತ್**
**ಸೀಮಾಸ್ತೋಮ ರೆನಿಪ್ಪರಾ ವಸುಮತೀದೇವರ್ಕ್ಕ ತ್ತೂರ್ಜ್ಜಿತರ್ ॥**

**॥ ಪ್ರಜಯಂ ಪಾಳಿಸಿ ಭೃತ್ಯರಂ ಪೊರೆದು ವಿದ್ವಿಷ್ಟಾವನೀಪಾಳಕ**
**ಬ್ರವಜಂ ಕೊಂಡು ನ ತಾವನೀಶಕುಳಮಂ ತಂನೊಳ್ಸಮಂ ಮಾಡಿ ಕೂ –**
**ಡೆ ಜಸಂ ದಿಕ್‌ಟವೆಂಟುಮಂ ಬೆಳಗೆ ಪೆಂಪಿಂ ಪೋಲ್ತನಾಧಿಕ್ಯಮಾ (ಭೂ)**
**ಭುಜರಂ ರಾಯಮುರಾರಿ ಸೋಮಮಹಿಪಂ ಶ್ರೀಬಿಜ್ಜಭೂಪಾತ್ಮಜಂ॥**

ಇದೆ ಶಾಸನದಲ್ಲಿ ದಾನ ಕಾರ್ಯ್ವನ್ನು ಮಾಡಿ ಪ್ರಸಿದ್ಧಿಯನ್ನು ಹೊಂದಿದ ಕಲ್ಲಿಸೆಟ್ಟಿಯ ಸಾದನೆಯನ್ನು ಕೊಂಡಾಡುವ ಪದ್ಯ ಗಮನಾರ್ಹವಾದುದು.

**ಶಾಸನ ಕವಿಗಳು:**

ಶಾಸನ ಕಾವ್ಯ ರೂಪಗೊಳ್ಳಬೇಕಾದರೆ ಮೊದಲು ಶಾಸನಗಳನ್ನು ತಾಳೆಗರಿಯ ಮೇಲೆ ಒಬ್ಬ ಬರೆಯಬೇಕು. ಇನ್ನೊಬ್ಬ ಅದನ್ನು ಕಾವ್ಯತರವಾಗಿ ಹೇಳಬೇಕು. ಮೂರನೆಯವ ಅದನ್ನು ಉಳಿಯ ಸಹಾಯದಿಂದ ಶಿಲೆಗಳ ಮೇಲೆ ಕೆತ್ತಬೇಕು. ಹೀಗೆ ಒಂದು ಶಾಸನ ನಿರ್ಮಾಣದಲ್ಲಿ ಮೂರು ಜನರ ಸಹಾಯವಿರುತ್ತದೆ. ಒಮ್ಮೊಮ್ಮೆ ಕವಿಯು ಕಂಡರಣೆಕಾರನು ಒಬ್ಬನೆ ಆಗಿದ್ದರೆ. ಇಬ್ಬರ ಸಹಾಯ ಬೇಕಾಗುತ್ತದೆ. ಶಾಸನದ ಕೊನೆಯಲ್ಲಿ "ರಚಿಯಿಸಿದವರ ಬರದಂ" ಎಂದಿದ್ದರೆ. ಆತ ಕೇವಲ ಶಿಲ್ಪಿ, ಕಂಡರಣೆಕಾರ ಎಂದು ತಿಳಿಯಬೇಕು. ಸಾಮಾನ್ಯವಾಗಿ ಶಾಸನವನ್ನು ಕೊರೆಯುತ್ತಿದ್ದ ಶಿಲ್ಪಿಗಳು ತಮ್ಮನ್ನು 'ರೂವಾರಿ' (ರೂಪಕಾರಿ) ಮತ್ತು 'ಸರಸ್ವತಿ ಗಣದಾಸಿ'ಗಳೆಂದು ಕರೆದುಕೊಂಡಿದ್ದಾರೆ. ಇವರು ಸುಂದರ ಅಕ್ಷರ ಬರೆಯುವ ಮತ್ತು ಶಿಲ್ಪಕಲೆಯಲ್ಲಿ ಪರಿಣತಿಗಳಾಗಿರುತ್ತಾರೆ. ಹಿಗಾಗಿ ಒಮ್ಮೊಮ್ಮೆ ಶಾಸನದಲ್ಲಿ ಯಾರು ಬರೆದರು ಎನ್ನುವುದು ಗೊತ್ತಾಗುವುದಿಲ್ಲ. ಆದರೆ ಕೆಲವು ಕಡೆ ಅಪರೂಪವಾಗಿ ಹೆಮ್ಮೆಯಿಂದ ತಮ್ಮ ಹೆಸರನ್ನು ಸ್ಪಷ್ಟವಾಗಿ ಶಾಸನ ಕವಿಗಳು ತಮ್ಮ ಹೆಸರನ್ನು ಹೇಳಿಕೊಂಡಿದ್ದಾರೆ.

**ಜಿನವರ್ಮ ಪಂಡಿತ:**

ಅಥಣಿ ನಾಡಿನ ಕೊಕಟನೂರು ಶಾಸನದಲ್ಲಿ ಮಹಾಮಂಡಳೇಶ್ವರನಾದ ಜೋಗ ಭೂಪನ ಹೇಳಿಕೆಯಂತೆ ಕವಿ ಜಿನವರ್ಮ ಪಂಡಿತನು ಶಾಸನವನ್ನು ರಚಿಸಿದ್ದಾಗಿ ಹೇಳಿದ್ದಾನೆ.

**"ಜನಿತೋತ್ಸಾಹದ ಮಂಡಳೇಶತಿಳಕಂ ಶ್ರೀ ಜೋಗಭೂಪಂ ಜಗ**
**ಜ್ಜನ ಚಿಂತಾಮಣಿ ತನಿದಂ ಬೆಸಸಲಿ ತ್ರೈಮೂರ್ತಿದೇವರ್ಗೆ ಶಾ**
**ಸನಮಂ ಶಾಸನಮಾಗಲೆಯ್ದೆ ಬರೆದಂ ವಿದ್ವಜ್ಜನಾಂಭೋಜಿನೀ**
**ವನಹಸಂ ಜಿನವರ್ಮಪಂಡಿತನಿಳಾ ಭಾಸ್ವದ್ಯಶೋ ಪಂಡಿತಂ ॥"**

ಈ ಶಾಸನದ ಪ್ರಾರಂಭದಲ್ಲಿ ಸಂಸ್ಕೃತ ಶ್ಲೋಕವಿದ್ದು ೧೭ ಕನ್ನಡ ಪದ್ಯಗಳಿವೆ. ಹದಿನಾರನೇ ಪದ್ಯದಲ್ಲಿ ವಿದ್ವಜ್ಜನಾಂಭೋಜನೀವನ ಹಂಸನೇಂದು ಬಿರುದಾಂಕಿತನಾಗಿದ್ದನ್ನು ಹೇಳಿದೆ. ಕವಿ ಜಿನವರ್ಮ ಪಂಡಿತ ಉಭಯ ಭಾಷಾ ವಿಶಾರದನಾಗಿರುವುದು ಇದರಿಂದ ತಿಳಿದುಬರುತ್ತದೆ.

ಈ ಶಾಸನದಲ್ಲಿ ಕಲ್ಯಾಣ ಚಾಲುಕ್ಯ ಚಕ್ರವರ್ತಿ ತ್ರೈಲೋಕ್ಯಮಲ್ಲದೇವನ ಆಳ್ವಿಕೆಗೆ ಸಂಬಂಧಿಸಿದ್ದು, ಚಕ್ರವತಿಯ ಪಾದಪದ್ಮೋಪಜೀವಿಯಾದ ಮಹಾಮಂಡಳೇಶ್ವರ ಜೋಗಪಯ್ಯ ಕರಹಡನಾಲ್ಸಾಸಿರ ಮತ್ತೆ ಮರಿಂಜೆ ಮೂರು ಸಾವಿರಗಳನ್ನು ಆಳುತ್ತಿದ್ದ ಸಂಗತಿ ಹೇಳಿ ಜೋಗಪಯ್ಯ ಮತ್ತು ಆತನ ಅರಿಸಿ ಪೊಲ್ಲಿಕಬ್ಬೆ ಸೇರಿ ವೈಶ್ಯಾಗ್ರಣಿ ಕೂಜಿಸೆಟ್ಟಿ

ಮಾಡಿಸಿದ ತ್ರೈಪುರುಷದೇವಾಲಯಕ್ಕೆ ಜನ್ನವಾಡ ಗ್ರಾಮವನ್ನು ದತ್ತಿ ಬಿಟ್ಟಿದ್ದನ್ನು ಉಲ್ಲೇಖಿಸಿದೆ. ಇದೇ ಶಾಸನದಲ್ಲಿ ವೈಶಾಗ್ರಣಿ ಕೂಚಶೆಟ್ಟಿ ಅಲ್ಲಿಯ ದೇವರ ತಪೋಧನರಿಗೆ ಮತ್ತು ಶಾಲೆಯನ್ನೋದುವ ವಿದ್ಯಾರ್ಥಿಗಳಿಗೆ ಉಪಾಧ್ಯಾಯರಿಗೆ ದಾನ ಕೊಟ್ಟಿದ್ದನ್ನು ತಿಳಿಸುತ್ತದೆ.

**ಮಲ್ಲಿದೇವ:**

ಕನ್ನಡ ನಾಡಿನ ರಾಮತೀರ್ಥ ಶಾಸನವು "ವಾಸುಗಿಯ ಮಹಿಮೆಯಂ ಬಣ್ಣಿಸಲ್ಬನಾವಂ ಮಲ್ಲಿದೇವನೊರ್ವ್ವನೆ ವಿಬ್ಧಾಶ್ರಯಂ ಚತುರನೀ ರಥನೀ ಪತಿ ಮಲ್ಲಿದೇವನೊಪ್ಪನೇ ಧರೆಗುಂಬ ತಾಂಬ್ರ ಶಾಸನದಂ ಶ್ರೀ ರಾಮೇಶ್ವರ ದೇವಶರಣರು" ಎಂದು ಹೇಳಿರುವುದರಿಂದ ಕವಿ ಮಲ್ಲಿದೇವನು ಕವಿಯಾಗಿರುವುದು ಸ್ಪಷ್ಟವಾಗುತ್ತದೆ. ಈತ ವಾಸುಗಿಯ ಮಹಿಮೆಯನ್ನು ಬಣ್ಣಿಸಲು ಸಮರ್ಥನಾಗಿದ್ದ, ಚತುರನಾಗಿದ್ದ, ವಿಭುದಾಶ್ರಯನಾಗಿದ್ದ ಎನ್ನುತ್ತದೆ ಶಾಸನ. ಕಲಚೂರಿ ಬಿಜ್ಜಳದೇವನ ಕಾಲಕ್ಕೆ ಸಂಬಂಧಿಸಿದ್ದ ಮಹಾಮಂಡಳೇಶ್ವರ, ಪೆರ್ಮ್ಮಾಡಿ, ಮಹಾಮಂಡಳೇಶ್ವರ ಬನ್ನರ ಮತ್ತು ಸುಂಕವೆರ್ಗ್ಗಡೆ ನಾಗದೇವಯ್ಯ ಸೇರಿ ಶ್ರೀ ಸ್ವಯಂಯಂಭು ರಾಮೇಶ್ವರ ದೇವರ ಸ್ಥಾನಾಚಾರ್ಯರಿಗೆ ದತ್ತಿ ಬಿಟ್ಟಿದ್ದನ್ನು ತಿಳಿಸಿದೆ.

**ಅಗ್ನಿಶರ್ಮ:**

ಅಥಣಿ ನಾಡಿನ ಮುರಗುಂಡಿ ಶಾಸನದಲ್ಲಿ ಅಗ್ನಿಶರ್ಮನು ಕುರಿತು ಉಲ್ಲೇಖ ಬಂದಿದ್ದು ಈತನು ಶಾಸನ ರಚಿಸಿದನೆಂದು, ಚತುರ್ಭಾಷಾ ಕವಿ ಚಕ್ರವರ್ತಿ ಎಂದು ಕರೆದುಕೊಂಡಿದ್ದಾನೆ. ಈ ಕವಿಯು ದೊಕೆಗಾಳಿ ಶಾಸನವನ್ನು ಬರೆದಿರುವುದಾಗಿ ತಿಳಿದು ಬರುತ್ತದೆ.

**ಲಕ್ಷ್ಮೀಧರ ಪಂಡಿತ:**

ಮುರುಗುಂಡಿ ಶಾಸನ ಎರಡು ದೃಷ್ಟಿಯಿಂದ ಪ್ರಮುಖವಾಗಿದೆ. ಇದು ಶಾಸನ ರಚಿಸಿದ ಅಗ್ನಿಶರ್ಮ ಹಾಗೂ ಶಾಸನ ಬರೆದ ಲಕ್ಷ್ಮೀಧರ ಪಂಡಿತರನ್ನು ಉಲ್ಲೇಖಿಸುತ್ತದೆ.[೧೩೬] ಲಕ್ಷ್ಮೀಧರ ಪಂಡಿತ ಮೂಲತಃ ಕವಿಯಾಗಿರಬಹುದು (ಪಂಡಿತ ಪದ ಅದನ್ನು ಸೂಚಿಸುತ್ತದೆ) ಆದರೆ ಪ್ರಸ್ತುತ ಶಾಸನವನ್ನು ಅಗ್ನಿಶರ್ಮ ರಚಿಸಿದನೆಂದಿರುವುದರಿಂದ ಇವನು ಅದನ್ನು ಕಲ್ಲಮೇಲೆ ಬರೆದಿದವನಾಗಿರಬೇಕು ಎಂದು ಭಾವಿಸಬೇಕಾಗುತ್ತದೆ. ಕಲಚುರಿ ಅಹಮಲ್ಲನ ಆಳ್ವಿಕೆಯ ಅವಧಿಯನ್ನು ತಿಳಿಸುವ ಈ ಶಾಸನವು ಅಹಮಲ್ಲನ ಮಂತ್ರಿಯಾದ ಸೋಮಚಮುಪತಿಯಂ ಸತ್ರತ್ರಿಯ ನರಸಿಂಹ ದೇವರಿಗೆ ದತ್ತಿಬಿಟ್ಟು ಕೊಟ್ಟದನ್ನು ಹೇಳುತ್ತದೆ. ಸಾಮಾನ್ಯವಾಗಿ ಮಧ್ಯಯುಗದ ಕನ್ನಡ ಶಾಸನಗಳು ಕೇವಲ ಗದ್ಯ ಇಲ್ಲವೆ ಪದ್ಯಗಳಿಗೆ ಬದಲು ಗದ್ಯ – ಪದ್ಯಗಳ ಮಿಶ್ರಣವಾದ ಚಂಪೂ ರೂಪದಲ್ಲಿ ಅರಳಿನಿಂತವು. ಇದಲ್ಲದೆ 'ಪುರಾಣಂ ಪಂಚಲಕ್ಷಣಂ' ಎಂಬ ಆದರ್ಶದಲ್ಲಿ 'ಶಾಸನಂ ಪಂಚಲಕ್ಷಣಂ' ಎಂಬ

ಸೂತ್ರವನ್ನು ಕಲ್ಪಿಸಿಕೊಂಡು, ಅದರ ಆದರ್ಶದಲ್ಲಿ ದೇವತಾಸ್ತುತಿ, ದೇಶ ವರ್ಣನೆ, ಕ್ಷೇತ್ರ ವರ್ಣನೆ, ಚಕ್ರವತಿ ಸಾಮಂತ, ವಿವರಣೆ, ದಾನಿ, ದಾನಮಿತ್ರ, ದಾನವಸ್ತು, ಸಮಾಪ್ತಿವಾಕ್ಯ ಎಂದು ವಿಶಿಷ್ಟ ಕ್ರಮವಿನ್ಯಾಸವನ್ನು ಪಡೆದವು. ಕಣಂಬಡೆ ನಾಡಿನಲ್ಲಿ ಕಲ್ಯಾಣ ಚಾಲುಕ್ಯ, ಕಲಚುರಿ, ಮತ್ತು ಸೇವುಣರ ಕಾಲಕ್ಕೆ ಸಂಬಂಧಿಸಿರುವುದರಿಂದ ಇವುಗಳಲ್ಲಿ ಚಂಪೂರೂಪ ಪಂಚಲಕ್ಷಣ ವಿನ್ಯಾಸ, ಕೊಕಟನೂರು ಶಾಸನ, ಉಮ್ರಾಣಿ ಶಾಸನಗಳಲ್ಲಿ ಕಂಡು ಬರುತ್ತದೆ. ಕಣಂಬಡೆ ನಾಡನ್ನು ಉಲ್ಲೆಖಿಸುವ ನೆರೆಯ ತರಿಕಾಡುನಾಡಿನ ಸಂಖ ಮತ್ತು ಶಾಸನ ಕಣಂಬಡೆ ನಾಡಿನ ಉಮ್ರಾಣಿ, ರಾಮತೀರ್ಥ, ಕೊಕಟನೂರು ಮತ್ತು ರಾಮತೀರ್ಥದ ಸ್ವಯಂಭ ರಾಮೇಶ್ವರ ಸ್ಥಾನಾಚಾರ್ಯರ ವಂಶಾವಳಿಯನ್ನು ತಿಳಿಸುವುದರಿಂದ ಸಾಹಿತ್ಯ ದೃಷ್ಟಿಯಿಂದ ಈ ಶಾಸನವೂ ಪ್ರಮುಖವಾಗಿದೆ.

## ಅಥಣಿ ನಾಡಿನ ಸಾಹಿತ್ಯ

### ಶಾಸನಗಳಲ್ಲಿ ಛಂದಸ್ಸು:

ಶಾಸನಗಳು ವ್ಯವಹಾರಿಕ ದಾಖಲೆಗಳಾಗಿರುವುದರಿಂದ ಭಾಷೆಯ ಆರಂಭದ ಕಾಲದಲ್ಲಿಯೆ ರೂಪಗೊಂಡಿರುತ್ತವೆ. ಆದ್ದರಿಂದ ಯಾವುದೇ ಭಾಷೆ ಅಥವಾ ಸಾಹಿತ್ಯದ ಉಗಮದ ಮೇಲೆ ಅವು ಅಮೂಲ್ಯ ಬೇಳಕು ಬೀರುತ್ತವೆ. ಅವುಗಳ ತಲಸ್ಪರ್ಶಿ ಅಧ್ಯಯನದಿಂದ ಆಯಾ ಭಾಷೆ ಸಾಹಿತ್ಯಗಳ ಪ್ರಾಚೀನತೆಯನ್ನು ನಿರ್ಣಯಿಸಬಹುದು. ರಾಜಕೀಯ ಚರಿತ್ರೆ ರಚನೆಗೆ ಶಾಸನಗಳು ಮೂಲ ಬೀಜಗಳಾದಂತೆ ಭಾಷೆ ಸಾಹಿತ್ಯಗಳ ಹಳಮೆಯನ್ನು ಪ್ರಚುರ ಪಡಿಸಲು ಅವು ಅತ್ಯಂತ ವಿಶ್ವಾಸಾರ್ಹ ಸಾಧನೆಗಳೆನಿಸಿವೆ.

ಶಾಸನಗಳು ಆಯಾ ಕಾಲದ ಜನಭಾಷೆಯಲ್ಲಿ ಲಿಖಿತಗೊಂಡ ದಾಖಲೆಗಳು. ಇವು ನಡೆದು ಬಂದ ರೀತಿ, ಸಾಧಿಸಿದ ಸಾಹಿತ್ಯ ಸಿದ್ಧಿಯೂ ಅಷ್ಟೇ ಮೌಲಿಕವಾಗಿವೆ. ೩೦೦೦ ದಷ್ಟು ಅನ್ಯಭಾಷಾ ಶಾಸನಗಳನ್ನು ಬಿಟ್ಟರೆ ಉಳಿಯುವ ಸುಮಾರು ೨೦ ಸಾವಿರ ಕನ್ನಡ ಶಾಸನಗಳಲ್ಲಿ ಸಾಹಿತ್ಯ ಗುಣದಿಂದ ಕೂಡಿದ ಸಾವಿರಾರು ಸಂಖ್ಯೆಯಲ್ಲಿವೆ. ಇವುಗಲ್ಲಿ ಮೊದಮೊದಲು ಸಾಮಾನ್ಯ ಗದ್ಯ ಹೆಚ್ಚು ಬರುಬರುತ್ತ ಸಮಾಸಯುಕ್ತ ಪದ್ಯ ಮತ್ತು ಗದ್ಯ ಪದ್ಯ ಮಿಶ್ರಣ ಹೆಚ್ಚಾಗಿ ಕಂಡುಬರುತ್ತದೆ. ಗದ್ಯ ಪದ್ಯಗಳ ಅದರಲ್ಲಿಯೂ ಕಂದ ವೃತ್ತಗಳ ಬಳಕೆ ಅಧಿಕ. ಗದ್ಯ ಸಾಮಾನ್ಯವಾಗಿದೆ.

ಕಣಂಬಡೆ ನಾಡಿನ ಕೊಕಟನೂರು ಮತ್ತು ಉಮ್ರಾಣಿ ಶಾಸನಗಳಲ್ಲಿ ಸಾಹಿತ್ಯದ ರೂಪಗಳಾದ ಚಂಪೂ, ವೃತ್ತ, ಮತ್ತು ಕಂದ ಬಳಕೆಗೊಂಡಿರುವುದು ಕಾಣುತ್ತವೆ. ಈ ನಾಡಿನ ಶಾಸನಗಳ ರಚನೆಯಲ್ಲಿ ಕರ್ನಾಟಕ ಖ್ಯಾತ ವೃತ್ತಗಳಾದ ಮಹಾಸ್ರಗ್ಧರಾವೃತ್ತ, ಮತ್ತೆಬವಿಕ್ರೀಡಿತ ವೃತ್ತ, ಚಂಪಕಮಾಲೆ ವೃತ್ತ, ಶಾಲಿನೀ ವೃತ್ತ ಅನುಷ್ಟಪ, ಮಾಲಿನಿ,

ಶಾರ್ದೂಲ ವಿಕ್ರೀಡಿತ ವೃತ್ತಗಳು ಮತ್ತು ಕಂದ ಪದ್ಯಗಳು ಕಂಡುಬಂದಿರುವುದು ಗಮನಾರ್ಹವಾಗಿದೆ. ಅವುಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

ಕೊಕಟನೂರು ಶಾಸನವು ಹನ್ನೊಂದು ವೃತ್ತಗಳನ್ನು ಒಳಗೊಂಡಿದ್ದು ಇವುಗಳಲ್ಲಿ ಮೂರು ಮಹಾಸ್ರಗ್ಧರ ವೃತ್ತ, ಐದು ಮತ್ತೇಭವಿಕ್ರೀಡಿತ ವೃತ್ತಗಳು, ಒಂದು ಚಂಪಕ ಮಾಲಾ ವೃತ್ತ, ಒಂದು ಶಾಲಿನಿ ವೃತ್ತ ಮತ್ತು ಒಂದು ಅನುಷ್ಟುಪ್ ವೃತ್ತದ ಪದ್ಯಗಳಿವೆ. ಆದರೆ ಶಾಸನವು ಅಲ್ಲಲ್ಲಿ ತ್ರುಟಿತವಾಗಿರುವುದರಿಂದ ಸ್ಪಷ್ಟವಾಗಿರುವ ಕೆಲವು ವೃತ್ತಗಳ ಉದಾಹರಣೆಯನ್ನು ವಿವರಿಸಿದೆ.

**ಕಂದಪದ್ಯ:**

ಕಣಂಬಡೆ ನಾಡಿನ ಉಮ್ರಾಣಿ ೧೩೬ ಮತ್ತು ಕೊಕಟನೂರು ೧೩೭ ಶಾಸನಗಳಲ್ಲಿ ಒಟ್ಟು ಇಪ್ಪತ್ತು ಕಂದ ಪದ್ಯಗಳು ಬಳಕೆಯಾಗಿರುವು ಗೊತ್ತಾಗುತ್ತದೆ. ಉದಾಹರಣೆಗಾಗಿ ಕೆಲವೊಂದು ಕಂವ ಪದ್ಯಗಳನ್ನು ಮಾತ್ರ ಅದ್ಯಯನಕ್ಕೆ ಬಳಸಿಕೊಳ್ಳಲಾಗಿದೆ.ಕಂದ ಪದ್ಯವು ನಾಲ್ಕು ಸಾಲುಗಳ ಒಂದು ಛಂದೋಬಂಧವಾಗಿದ್ದು ಹಳಗನ್ನಡ ಚಂಪೂ ಕಾವ್ಯಗಳಲ್ಲಿ ಬಳಕೆಯಾದಂತೆ ಶಾಸನಗಳಲ್ಲಿಯೂ ಬಳಕೆಗೊಂಡಿರುವುದು ಗಮನಾರ್ಹ. ಕನ್ನಡ ಸಾಹಿತ್ಯದ ರತ್ನತ್ರಯರಾದ ಪಂಪ, ರನ್ನ ಮತ್ತು ಪೊನ್ನರು ವೃತ್ತಗಳನಡುವೆ ಕಂದ ಪದ್ಯಗಳನ್ನು ವಿಶೇಷವಾಗಿ ಬಳಸಿಕೊಂಡಿದ್ದು ಕಂಡುಬರುತ್ತದೆ. ಕಂದ ಸಂಸ್ಕೃತದಲ್ಲಿ ಆರ್ಯಗೀತ ಎನಿಸಿದರೂ, ಪ್ರಾಕೃತದಲ್ಲಿ 'ಸ್ಕಂದಕ' ಎನಿಸಿದ ಛಂದೋವಿಧಾನವು ಕನ್ನಡದಲ್ಲಿ ಕಂದವಾಗಿದೆ.

**ಲಕ್ಷಣ:**

ಕಂವವು ನಾಲ್ಕು ಪದಗಳಿಂದ ಕೂಡಿದ ಅರ್ದ ಸಮವೃತ್ತ ಪದ್ಯ ಮೊದಲನೆಯ ಮತ್ತು ಮೂರನೆಯ ಪಾದಗಳಲ್ಲಿ ನಾಲ್ಕು ಮಾತ್ರೆಯ ಮುರು ಗಣಗಳು ಬರುತ್ತವೆ. ಎರಡನೆಯ ಮತ್ತು ನಾಲ್ಕನೇಯ ಪಾದಗಳಲ್ಲಿ ನಾಲ್ಕು ಮಾತ್ರೆಯ ಐದು ಗಣಗಳುಬರುತ್ತವೆ. ಮೂರು ಐದು ಮತ್ತು ಏಳನೆಯ ವಿಷಯ ಸ್ಥಾನದಲ್ಲಿ 'ಜ' ಗಣ ಬರಕೂಡದು ಎರಡು ಮತ್ತು ನಾಲ್ಕನೆಯ ಪಾದಗಳ ಕೊನೆಯ ಅಕ್ಷರವು ಕಡ್ಡಾಯವಾಗಿ ಗುರು ಆಗಿರಬೇಕು. ಆರು ಮತ್ತು ಹದಿನಾಲ್ಕನೆಯ ಸ್ಥಾನದ ಗಣವು ಮಧ್ಯ ಗುರುವುಳ್ಳದಾಗಲಿ 'ಜ' ಗಣ ಅಥವಾ ಸರ್ವಲಘು ಗಣವಾಗಲಿ ಆಗಿರಬೇಕು. ಮೊದಲಿನ ಹ್ರಸ್ವದ ಮುಂದೆ ಯತಿ ಇರುತ್ತದೆ. ಕೊಕಟನೂರು ಶಾಸನದಲ್ಲಿ ಬಳಕೆಯಾಗಿರುವ ಕಂದ ಪದ್ಯವನ್ನು ಛಂದಸ್ಸಿನ ಹಿನ್ನಲೆಯಲ್ಲಿಒಂದು ಪದ್ಯ ಉದಾಹರಣೆಯಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ.

ಈ ರೀತಿಯಾಗಿ ಅಥಣಿ ತಾಲೂಕಿನ ಪರಿಸರದಲ್ಲಿ ಇರುವ ವಿವಿಧ ಶಾಸನಗಳನ್ನು ಅಧ್ಯಾಯಿಸಿ ತಾಲೂಕಿನ ಚಾರಿತ್ರಿಕ, ಸಾಂಸ್ಕೃತಿಕ, ಮಹತ್ವವನ್ನು ಕಟ್ಟಿಕೊಡುವ ಒಂದು ಪ್ರಯತ್ನ ಮಾಡಲಾಗಿದೆ.

## ಗ್ರಂಥಋಣ :


೧. ಕಲಬುರ್ಗಿ ಎಂ.ಎಂ.ಶಾಸನ ಸಂಪದ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ ೧೯೭೪.

೨. ಕಲಬುರ್ಗಿ ಎಂ.ಎಂ.ಮಹಾರಾಷ್ಟ್ರದ ಕನ್ನಡದ ಶಾಸನಗಳು ಕನ್ನಡ ಅಧ್ಯಯನ ವಿಭಾಗ ಮುಂಬೈ ವಿಶ್ವವಿದ್ಯಾಲಯ ೧೯೮೭.

೧. ೩. ಕಣಂಬಡೆ ಮುನ್ನೂರು ಒಂದು ಅಧ್ಯಯನ ಪಿ.ಎಚ್.ಡಿ. ಪ್ರಬಂಧ ಕ.ವಿ.ವಿ. ಧಾರವಾಡ ಡಾ.ಬಿ.ಆರ್.ರಾಠೋಡ ೨೦೧೧.

೩. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಡಾ. ಎಂ.ಚಿದಾನಂದ ಮೂರ್ತಿ ಪ್ರಸಾರಂಗ ಕ.ಶಾ.ಸಾ.ಅ. ಮೈಸೂರು.

೪. ಐನಾಪೂರ ಸಾಂಸ್ಕೃತಿಕ ಅಧ್ಯಯನ ಡಾ.ವ್ಹಿ.ಎಸ್.ಮಾಳಿ ೨೦೧೬.

೫. ಕರ್ನಾಟಕ ಶಾಸನ ಸಂಶೋಧನೆ ಡಾ.ಕೆ.ಜಿ.ಭಟ್‌ಸೂರಿ ಪ್ರಸಾರಂಗ ಕ.ವಿ.ವಿ. ಹಂಪಿ ೨೦೦೯.

೬. ಪ್ರಾಚೀನ ಕರ್ನಾಟಕದ ರಾಜಕೀಯ ವಿಭಾಗಗಳು ಡಾ. ಚನ್ನಬಸವಯ್ಯ ಹಿರೇಮಠ ಪ್ರಸಾರಂಗ ಕ.ವಿ.ವಿ. ಹಂಪಿ ೨೦೧೪.

೭. ಕರ್ನಾಟಕ ಭಾರತಿ ಸಂಪುಟ ೩ ಸಂಚಿಕೆ ೨ ಆರ್.ಎನ್.ಗುರವ ೧೯೭೦.

೮. ಪಂಚಮುಖಿ ಆರ್.ಎಸ್. ಕರ್ನಾಟಕ ಇತಿಹಾಸ, ಕರ್ನಾಟಕ ಇತಿಹಾಸ ಸಂಶೋಧನಾ ಮಂಡಳಿ ಧಾರವಾಡ.

೯. ನಾಗಯ್ಯ ಜೆ.ಎಂ. ಆರನೇ ವಿಕ್ರಮಾಧಿತ್ಯನ ಶಾಸನಗಳು ಒಂದು ಅಧ್ಯಯನ ಶ್ರೀ ನಾಗನೂರು ರುದ್ರಾಕ್ಷಿ ಮಠ ಬೆಳಗಾವಿ ೧೯೯೨.

೧೦. ಅಥಣಿ ತಾಲೂಕಾ ಸಮಗ್ರ ದರ್ಶನ ಪ್ರಧಾನ ಸಂಪಾದಕರು ಡಾ. ವ್ಹಿ.ಎಸ್.ಮಾಳಿ ವಿಮೋಚನಾ ಪ್ರಕಾಶನ ಅಥಣಿ ೨೦೦೭.

೧೧. ಡಾ. ಎಸ್.ಕೆ.ಕೊಪ್ಪ “ತರ್ದವಾಡಿ ನಾಡು ಒಂದು ಅಧ್ಯಯನ” ಪ್ರತಿಭಾ ಪ್ರಕಾಶನ ಇಂಡಿ ೧೯೯೦.

೧೨. ಪರಶೀವ ಮೂರ್ತಿ ಡಿ.ವ್ಹಿ. ಕನ್ನಡ ಶಾಸನ ಶಿಲ್ಪ ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ ೧೯೯೯.

೧೩. ಅಥಣಿ ಪ್ರದೇಶದ ಸಾಂಸ್ಕೃತಿಕ ಅಧ್ಯಯನ ಎಂ.ಫಿಲ್. ಪ್ರಬಂಧ ಕ.ವಿ.ವಿ. ಧಾರವಾಡ.

೧೪. ಅಥಣಿ ಬನಿ–ದನಿ ಡಾ.ವ್ಹಿ.ಎಸ್.ಮಾಳಿ ಶ್ರೀ ಗುರು ಚನ್ನಬಸವೇಶ್ವರ ಗ್ರಂಥಮಾಲೆ ಜಂಗಮಲಿಂಗ ಕ್ಷೇತ್ರ ಶ್ರೀ ಮೊಟಗಿ ಮಠ ಅಥಣಿ೨೦೧೧.

೧೫. ಬೆಳಗಾವಿ ಜಿಲ್ಲೆ ಗೆಜೆಟಿಯರ್ ಸೂರ್ಯನಾಥ ಕಾಮತ ಯು. ದೊಡಶ್ರೀ ಪ್ರಿಂಟರ್ಸ್ ಬೆಂಗಳೂರು ೧೯೮೭.

೧೬. ಹಿರೇಮಠ ಡಿ.ಆರ್. ಶಾಸನಗಳಲ್ಲಿ ಕರ್ನಾಟಕದ ವರ್ತಕರು ಕರ್ನಾಟಕ ವಿ.ವಿ.ಧಾರವಾಡ ೧೯೮೬.

೧೭. ಶಾಸನಗಳ ಪ್ರಕಾರ ಮತ್ತು ಅವುಗಳ ಮಹತ್ವ ಡಾ.ನಾಯಕರ ಹುಲಗಪ್ಪ ಪ್ರಸಾರಂಗ ಕ.ವಿ.ವಿ. ಹಂಪಿ ಮಂಟಪ ಮಾಲೆ ೨೬೨ ೨೦೧೧.